

# ಹಿಂಗಾರ



ಕರ್ನಾಟಕ ಸರ್ಕಾರ

ಅರೆಭಾಷೆ ತ್ರೈಮಾಸಿಕ

ಸಂಪುಟ-3 ಸಂಚಿಕೆ-12 ದಿನಾಂಕ : 31.12.2019 ಕೊಡಗು ರೂ. 20/-

ಅಕ್ಟೋಬರ್-ನವೆಂಬರ್-ಡಿಸೆಂಬರ್

2019

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ



# ಹಿಂಗಾರ

ಅಕ್ಟೋಬರ್–ನವೆಂಬರ್–ಡಿಸೆಂಬರ್–2019

**"HINGARA"** A quarterly on Arebashe Language, Litereature and Culture, Published by 'Karnataka Arebashe Samskruthi Mathu Sahithya Academy' Madikeri - 571201

ಪ್ರಕಟಣೆ : ಅಕ್ಟೋಬರ್-ನವೆಂಬರ್-ಡಿಸೆಂಬರ್-2019

ಪುಟಗಳು :

ಬೆಲೆ : ರೂ. 20/-



ಪ್ರಕಟಣೆ :

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,**

'ಕಾಫಿ ಕೃಪಾ' ಕಟ್ಟಡ, 1ನೇ ಮಹಡಿ, ರಾಜಾಸೀಟ್ ರಸ್ತೆ,

ಮಡಿಕೇರಿ, ಕೊಡಗು ಜಿಲ್ಲೆ.

ಪುಸ್ತಕ ಸಿಗುವ ಸ್ಥಳ :

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,**

'ಕಾಫಿ ಕೃಪಾ' ಕಟ್ಟಡ, 1ನೇ ಮಹಡಿ, ರಾಜಾಸೀಟ್ ರಸ್ತೆ,

ಮಡಿಕೇರಿ, ಕೊಡಗು ಜಿಲ್ಲೆ.

ದೂರವಾಣಿ ಸಂಖ್ಯೆ : 08272-223055

ಮುದ್ರಕರು:

ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,

ಪೂಜಾ ಆರ್ಕೇಡ್,

ಜೂನಿಯರ್ ಕಾಲೇಜ್ ರಸ್ತೆ, ಮಡಿಕೇರಿ.

Ph. 08272-224919, 9448135592



# ಹಿಂಗಾರ

ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

ಪ್ರಧಾನ ಸಂಪಾದಕರ್
**ಲಕ್ಷ್ಮೀ ನಾರಾಯಣ ಕಜೆಗದ್ದೆ**

ಸಂಪಾದಕರ್
**ಬಾರಿಯಂಡ ಜೋಯಪ್ಪ**

ಪ್ರಕಾಶಕರ್
**ಚಿನ್ನಸ್ವಾಮಿ**



# ಅಧ್ಯಕ್ಷರ ನುಡಿ



ಎಲ್ಲವುಕು ನಮಸ್ಕಾರ.

ಹೊಸ ಚಿಂತನೆ ಮತ್ತೆ ಹೊಸ ಆಲೋಚನೆಗಳನ್ನ ಕಟ್ಟಿಕಂಡ್ ಹೊಸ ಯೋಜನೆಗಳಿಗೆ ರೂಪುರೇಷೆ ಹಾಕಿಕಂಡ್ ನಾವು ಹೋಗುತ್ತೊಳ. ನಮ್ಮ ಹೆಗ್ಲೇಲೆ ದೊಡ್ಡ ಜವಾಬುದಾರಿ ಉಟ್ಟು. ಈ ದಿಕ್ಲಿ ನಾವ್ ಈಗಾಗಲೇ ಸುಮಾರ್ ಕಾರ್ಯಕ್ರಮಗಳ ಪಟ್ಟಿ ಮಾಡಿಕೊಂಡೊಳ.

ಈ ಹಿಂದೆ ಎರಡ್ಸರ್ತಿ ಬೆಂಗಳೂರ್‌ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ, ಮಾನ್ಯ ಮಂತ್ರಿಗಳಾದ ಸಿ. ಟಿ. ರವಿಯವರ ಅಧ್ಯಕ್ಷತೆಲಿ ನಡ್ದ ಸಭೆಗೆ ಹಾಜರಾಗಿ ಅಲ್ಲಿಂದ ಸಾಕಷ್ಟ್ ವಿಚಾರನ ಪಡಕೊಂಡೊಳ. ಅಕಾಡೆಮಿಯ ಕಾರ್ಯಕ್ರಮ ನಡೆಸಿಕನ ಉದ್ದೇಶಕ್ಕೆ ಮುಖ್ಯ ಒತ್ತು ಕೊಡೋಕು, ಆಡಂಬರಕ್ಕೆ ಅಲ್ಲ ಅಂತ ಅವರ ಮಾತುಗಳನ್ನ ನಾವು ಅಷ್ಟೇ ಎಚ್ಚರಿಕೆಯಿಂದ ಪಾಲಿಸುವ ಹೊಣೆ ಹೊತ್ತೊಳೋ. ಮುಖ್ಯವಾಗಿ ಸದಸ್ಯರ ಕೊರತೆ ನಮ್ಮನ್ನ ಕಾಡುತ್ತುಟ್ಟು .

ಇದೆಲ್ಲದರ ನಡುಲಿಯೂ ನಮ್ಮ ಸಭೆ, ಕಾರ್ಯಕ್ರಮ, ಹಿಂಗಾರ ತ್ರೈಮಾಸಿಕ ಪತ್ರಿಕೆಯ ಹೊಣೆಗಾರಿಕೆ ಎಲ್ಲೂ ಲೋಪ ಆಗದಂಗೆ ನಡೀತುಟ್ಟುತೇಳುದು ನಮಗೆ ಕುಸಿ ಕೊಟ್ಟುಟು. ಜಂಬರಗ ಬರೇ ಮನರಂಜನೆಗೆ ಮಾತ್ರ ಅಲ್ಲದೇ ನಮ್ಮ ತಿಳುವಳಿಕೆನ ಹೆಚ್ಚಿಸುವ ಕಾರ್ಯಕ್ರಮದತ್ತ ಗಮನ ಕೊಡುತೊಳೊ. ಸರಳವಾಗಿ ಜಂಬರ ನಡೆಸುದು ನಮ್ಮ ಗುರಿ. ಅದರೊಳಗೆ ಜಾಸ್ತಿ ಪಡ್ಕೊಣಕು ಹೇಳ್ದು ನಮ್ಮ ಆಸೆ. ಅರೆಬಾಸೆ ನಮ್ಮ ಸಮುದಾಯನ ದಾಟಿ ಬೆಳಿಯೋಕೂ. ಆಗಲೇ ಬಾಸೆ ಮತ್ತೆ ಸಂಸ್ಕೃತಿ ಉಳಿಯುದು ಬೆಳಿಯುದು. ಈ ಮಾರ್ಗಲಿ ನಾವುಗ ಯೋಚಿಸೋಕು.

ನಮ್ಮ ಸಂಸ್ಕೃತಿಲಿ ಇರುವ ಜನಪದ, ಸೋಬಾನೆ, ಚಿತ್ರಕಲೆ, ಹಾಡ್, ಹಸೆ ಎಲ್ಲವೂ ಬಾಳ ಅಪೂರೂಪ. ನಮ್ಮ ಸಂಸ್ಕೃತಿಯ ದೇಸೀ ಸೊಗಡು ಅದು ಮರೆಯಾಗದಂಗೆ ನೋಡಿಕಣಕಾದ ತುರ್ತು ನಾವುಗೆ ಉಟ್ಟು. ಆ

ಕಾರಣಕ್ಕೆ ಇವುಗಳ ಕುರಿತಾದ ಕಾರ್ಯಾಗಾರ, ಸಂವಾದ, ಆಚರಣೆ, ಅನುಸರಣೆಗಾಗಿ ಅಕಾಡೆಮಿ ಕಡೆಯಿಂದ ಹಲವು ಕಾರ್ಯಕ್ರಮಗಳ ಇದಾಗಲೇ ತಯಾರು ಮಾಡಿ ಇಟ್ಟೊಳ. ಇದಕ್ಕೆ ನಿಮ್ಮೆಲ್ಲರ ಪ್ರೀತಿ, ಸಹಕಾರ, ಬೆಂಬಲ ಅಗತ್ಯ. ನೀವೆಲ್ಲ ನಮ್ಮ ಚಿಂತನೆಗಳಿಗೆ ಪ್ರೋತ್ಸಾಹ ಕೊಡುದರ ಮೂಲಕ ಅಕಾಡೆಮಿಯ ಕಾರ್ಯ ಚಟುಟಿಕೆಗ ಮುಂದೆ ಸಾಗಿದೆಂತೇಳುದು ನಮ್ಮ ಮನ್ಸಲಿ ಉಟ್ಟು.

✍ಲಕ್ಷ್ಮೀ ನಾರಾಯಣ ಕಜೆಗದ್ದೆ
ಅಧ್ಯಕ್ಷರ್

ಮಾನ್ಯ ಓದುಗರ ಗಮನಕ್ಕೆ

ಸರಕಾರ ಬದಲಾದಂಗೆ ಅಕಾಡೆಮಿ ಸಮಿತಿನೂ ಬದಲಾವಣೆ ಆತ್. ಹಂಗಾಗಿ 2019 ರ ಅಕ್ಟೋಬರ್-ನವೆಂಬರ್-ಡಿಸೆಂಬರ್ ತಿಂಗಳ ಹಿಂಗಾರ ಸಂಚಿಕೆನ ತಾಕಾತ್ಲೆ. ಇದೀಗ ರಚನೆ ಆದ ನಾಕನೇ ಸಮಿತಿ ಅಧಿಕಾರಲ್ಲುಟ್ಟು. ಯಾವುದೇ ಕಾರಣಕ್ಕೂ ಹಿಂಗಾರ ತ್ರೈಮಾಸಿಕ ನಿಲ್ಲಿಕೆ ಬತ್ತ್‌ತ ಹಿಂದೆನ ಬಾಕಿ ಸಂಚಿಕೆನ ಮುದ್ರಣ ಮಾಡಿ ಮಾನ್ಯ ಓದುಗರ ಕೈಗೆ ಕೊಡ್ತೊಲೊ.

– ಪ್ರ. ಸಂ.

# ಸಂಪಾದಕೀಯ



ಇಂದ್ ಪುಸ್ತಕ ಓದುವ ಹವ್ಯಾಸ ಕಮ್ಮಿ ಆಗ್ತಾ ಉಟ್ಟುತ ಕೆಲವರ ಅಭಿಪ್ರಾಯ. ಅದ್ ಹೌದುತೇ ಆದೆಲ್ಲಾ? ಯಾಕಾಗಿರ್ದು? ಒಂದ್ ಕಾಲ ಇತ್ತ್. ಪಾಠ ಪುಸ್ತಕದ ನಡೂಲಿ ಕತೆ ಪುಸ್ತಕನ ಇಸಿಕಂಡ್ ಓದಿ ಮಕ್ಕ ಕುಸಿಪಡ್ತಿದ್ದೊ. ಹೆಂಗೂ ಅಪ್ಪ ಅವ್ವ ಓದಿದವ್ ಅಲ್ಲ. ಮಕ್ಕ ಎಂತದರ ಓದ್‌ತ್ತೊಳೊತ ಅವ್ಕೆ ಹೆಂಗೆ ಗೊತ್ತಾದೆತ ಮಕ್ಕಳಿಗೆ ಸಸಾರ ಆಗ್ತಿತ್ತ್. ಆದರೆ ಅಪ್ಪ ಅವ್ವ ಓದದಿದ್ದರೇನ್ ಗಡ, ಎಚ್ಚರಂದ ಮಕ್ಕಳ ಪುಸ್ತಕ ನೋಡಿ ಪತ್ತೆ ಮಾಡಿ ಸಮಾ ಬೊಯ್ಯೊತಿದ್ದೊ. ಇಸ್ಕೂಲಿಗೂ ಹೋಗಿ ಪುಕಾರ್‌ನೂ ಕೊಡ್ತಿದ್ದೊ.

'ಚಂದ ಮಾಮ' ಪುಸ್ತಕನ ಓದದವು ಅಂದ್ ಯಾರಿದ್ದೊ? ದನ ಮೇಸಕನ, ಗದ್ದೆ ಪಾರಕ್ಕೆ ಹೋಕನೆಲ್ಲಾ ಕತೆ ಪುಸ್ತಕ ಕೈಲಿರ್ತಿತ್. ರಾತ್ರಿ ಮಲ್ಗಿಕೆ ಮುಂದೆ ಒಂದೆರ್ಡ್ ಕತೆ ಓದಿಯೇ ಮಲಗ್‌ತಿದ್ದೊ. ದಿಂಬು ಕೆಳಗೆ ಪುಸ್ತಕ ಇಸಿಕಂಡ್ ನಿಲ್ಗ್‌ತಿದ್ದೊ.

ಮಕ್ಕ ದೊಡ್ಡವ್ ಆತಿದ್ದಂಗೆ ಬೇರೆಬೇರೆ ಕತೆ ಪುಸ್ತಕಗಳ ಓದ್‌ತಿದ್ದೊ. ಮತ್ತೆ ಮತ್ತೆ ಕಾದಂಬರಿ ಓದ್‌ಗರ್ ಸುರು ಆದೊ. ಅದರ್ಲೂ ಪತ್ತೆದಾರಿ ಕಾದಂಬರಿನ ಕಾಲೇಜ್ ಮಕ್ಕ ಓದ್‌ತಿದ್ದೊ. ಅಂದ್ ಹಂಗೆ ಇದ್ದ ಪುಸ್ತಕ ಪ್ರೀತಿ ಇಂದ್ ಎತ್ತ ಹೋತು?

ಇಂದ್ ಒಂದ್ ಅಂದಾಜಿ ಪ್ರಕಾರ ಓದುವ ಚಾಳಿ ಇರವು ಅರವತ್ತು ವರ್ಷ ಮೇಲ್ಪಟ್ಟವು. ಇನ್ನೊಂದ್ ಗುಂಪು ಸಾಧಾರಣ ಆಸಕ್ತಿ ಇರವು ನಲವತ್ತರ ಆಸ್‌ಪಾಸವು. ಅದ್ ಬುಟ್ಟರೆ ನಲವತ್ತರ ಈಚೆನವು ಎಲ್ಲೋ ಅಲ್ಲೊಂದು ಇಲ್ಲೊಂದ್. ಬಾಕಿ ಇರವು ಡಿಜಿಟಲ್ ಓದ್‌ಗರ್!

ಡಿಜಿಟಲ್ ಓದ್‌ಗರ್ ಓದ್‌ಗರ್ ಅಲ್ಲನಾ? ಹೌದು, ಅವೂ ಓದುಗರೇ. ಅವು ಹೊಸ ತಂತ್ರಜ್ಞಾನದ ಜ್ಞಾನಿಗ. ಅವರ್‍ನ ದೂಷಣೆ ಮಾಡುವಂಗಿಲ್ಲೆ. ಯಾಕೆತ್ತೇಳ್ರೆ ಹೊಸ ಹೊಸ ವ್ಯವಸ್ಥೆಗೆ ಹೊಂದಿಕಣದೆ ಹೋದರೆ ಅವು ಮೂಲೆಗಾದವೆ. 'ಕಾಲ ಬಂದಂಗೆ ಕೋಲ'ತ್ತೇಳುವ ಸ್ಥಿತಿ!

ಏನೇ ಹೇಳಿ, ಬರವಣಿಗೆ ಶಾಶ್ವತ. ಪುಸ್ತಕ ಮುಂದೆನ ಪೀಳಿಗೆನ ಆಸ್ತಿತ್ತೇಳುದರ ಮರೆಕಾಗದಲ್ಲ?

ಬಾರಿಯಂಡ ಜೋಯಪ್ಪ.
ಸಂಪಾದಕ

31–12–2019

ಪ್ರಕಟ ಆದ ಬರವಣಿಗೆಗೆ ಆಯಾ ಬರಹಗಾರರೆ ಜವಾಬ್ದಾರರ್.

# ಹಿಂಗಾರ ಒಡ್ಸಕನ

ಪ್ರಾರ್ಥನೆ

# ಶ್ರೀ ಕಾವೇರಿ ಮಾತೆ ಸ್ತುತಿ

ಲೋಕಕಲ್ಯಾಣಿ ತೀರ್ಥ ಸ್ವರೂಪಿಣಿ
ಕಾಪಾಡ್ ಶ್ರೀಮಾತೆ ಕಾವೇರಿಯೇ ॥2॥
    ಕವೇರನ ಮಗಳ್ ಅಗಸ್ತ್ಯನ ಹೆಣ್ಣ್
    ನಂಬ್ಯೊಳೆ ನಿನ್ನ ಶ್ರೀಮಾತೆ ಕಾವೇರಿಯೇ
    ಕಾಪಾಡ್ ಶ್ರೀ ಮಾತೆ ಕಾವೇರಿಯೇ
    ಕಾವೇರಿಯೇ ಅವ್ವ ಕಾವೇರಿಯೇ
    ಕಾವೇರಿಯೇ ಅವ್ವ ಕಾವೇರಿಯೇ॥
ಕೊಡಗ್‌ಲಿ ಎಲ್ಲೆಲ್ಲೂ ಹಸ್‌ರ್ ನೆಲ
ನಿನ್ನೊಡಲ ತುಂಬೆಲ್ಲ ಪಾವನ ಜನ ॥2॥
ಈ ನೆಲಲಿ ಎಂದೆಂದ್ ನೆಲೆ ನಿಲ್ಲ್ ನೀ
ಭಕ್ತರ ಬಾಳ್‌ನ ಬೆಳಗಿಸ್ ನೀ ॥2॥
    ಲೋಕಕಲ್ಯಾಣಿ ತೀರ್ಥ ಸ್ವರೂಪಿಣಿ
    ಕಾಪಾಡ್ ಶ್ರೀಮಾತೆ ಕಾವೇರಿಯೆ ॥
ಭಕ್ತಿಲಿ ಪೂಜೆನ ನಾ ಮಾಡಿನೆ
ಪಾಪಗಳ ಕಳ್ದ್ ನೀ ಕಾಪಾಡಪ್ಪಾ ॥2॥
ಈ ಮಣ್ಣ್‌ನ ಕಣಕಣಲಿ ಜೀವಾ ಸೆಲೆ
ನಂಬಿದ ಭಕ್ತರ್‌ಗೆ ಬದುಕ್ ನೆಲೆ ॥2॥
    ಲೋಕಕಲ್ಯಾಣಿ ತೀರ್ಥ ಸ್ವರೂಪಿಣಿ
    ಕಾಪಾಡ್ ಶ್ರೀ ಮಾತೆ ಕಾವೇರಿಯೇ
    ಕವೇರನ ಮಗಳ್ ಅಗಸ್ತ್ಯನ ಹೆಣ್ಣ್
ನಂಬ್ಯೊಳೆ ನಿನ್ನ ಶ್ರೀಮಾತೆ ಕಾವೇರಿಯೇ
ಕಾವೇರಿಯೇ ಅವ್ವಾ ಕಾವೇರಿಯೇ
ಕಾವೇರಿಯೇ ಅವ್ವಾ ಕಾವೇರಿಯೇ

✍ಕಟ್ರತನ ಲಲಿತಾ ಅಯ್ಯಣ್ಣ

(ಕತಾ ಜೊಂಪೆ)

# ಭಾಯ್ ನೈ ಪೀಯಾ.., ನೈ ಗ್ಲಾಸ್ ಘೋಡ., ಪಂದ್ರಾನೇ

ನೀವ್ಗೆ ನೆಂಪುಟ್ಟಾ ಇಲ್ಲೆನ ಗೊತ್ಲೆ.. ಯರ್ಡ್ ವರ್ಸಕೆ ಮುಂದೆ ನಮ್ಮ ಕಲ್ಲಾಜೆಲಿ ಚೌತಿ ದಿನ ನಾಟಕ ಮಾಡಿ ಕಿತಾಪತಿ ಮಾಡಿ ಓಡಿ ಹೋದಂವ ನಾ ಮತ್ತೆ ಊರ್ಕಡೆ ತಲೆ ಹಾಕಿತ್ಲೆ... ಜಾತ್ರೆ, ಗೌಜಿ ಗದ್ದಲ ಯಾವ್ದಕ್ಕು ಬಾತ್ಲೆ. ಅದ್ ಕಳ್ದ ಮೇಲೆ ಇಂದ್ ಮಣಿಪಾಲಂದ ಊರು ಕಡೆ ಚೌತಿಗೆ ವಾರಕೆ ಮುಂದೆ ಹೊರ್ಟೆ...

ಸುಬ್ರಮಣ್ಯಕೆ ಎತ್ತಿ., ಸುಳ್ಯ ಬಸ್ಸ್ ಹತ್ತಿ ಕಲ್ಲಾಜೆ ಟಿಕೆಟ್ ಮಾಡಿ ಕುದ್ದೆ.. ಕಲ್ಲಾಜೆ ಹಕ್ಕಲೆ ಹಕ್ಕಲೆ ಎತ್ತಿಕನನೆ ಒಂತರ ಆಕೆ ಸುರಾತ್. ಅಂದ್ ಅಸ್ಟೆಲ್ಲ ಕಾರ್ಬಾರ ಮಾಡಿಹೋಗಿ ಇಂದ್ ಈ ಊರುನ ಜನಕ್ಕೆ ಹೇಂಗೆ ಮೋರೆ ತೋರ್ಸುದುಂತ.. ಸಣ್ಣಕೆ ಮಳೆ ಬೇರೆ ಬರ್ತಾ ಉಟ್ಟು. ಒಂದ್ ಕಿಣಿ ತಲೆಲಿ ಹೊಳ್ತ್., ಕಲ್ಲಾಜೆಲಿ ಬಸ್ಸ್ ಇಳ್ದಾಂಗೆ ಕೊಡೆ ಇಲ್ಲದ ನೆವನ ಹೇಳಿಕಂಡ್ ಯಾರಿಗು ಮೋರೆ ತೋರ್ಸದೆ ಮನೆಕಡೆ ಓಡೊಮುತ ಗ್ರೇಸಿಕಂಡೆ.. ಸುಟ್ಟ ಮಳೆ ಕಲ್ಲಾಜೆಲಿ ಬಸ್ಸ್ ಇಳೆಕನ ಜೋರು ಮಳೆ ಬರೊಕ.. ಎಂತ ಮಾಡ್ದು ಉಪಾಯ ಇಲ್ಲದೆ ಬಸ್ಸ್ಂದ ನಾಲ್ಕೇ ಹೆಜ್ಜೆ ಹಾರಟಲಿ ನಮ್ಮ ಕುಸುಮಣ್ಣನ ಅಂಗಡಿಗೆ ನುಗ್ಗಿದೆ... ಅಂಗಡಿನ ಹೊರಗೆ ಪಟ್ಟಾಂಗ ಹೊಡೆತಿರ್ದು ಅದೇ ಜನಗ.. ಒಳಗೆ ಇಣ್ಕಿ ನೋಡ್ರೆ ಮಾತ್ರ ಅಂಗಡಿ ಒಳಗೆ ಇರ್ವ ಜನ ಬೇರೆ., ಕುಸುಮಣ್ಣ ಅಲ್ಲ ನಮ್ಮ ಪಂಡ್‌ನ ವಿಲನ್ ಯತಿಶ ಕುದ್ದುಟು..

ಅಂವನ ನೋಡಿ ನಾ ಕೇಳ್ದೆ " ಈ ದಾನೆ ಮೂಳು??"

ಅಂವ ಹೇಳ್ತ್ "ಯಾನ್ ಮೂಳೆ.."

ನಾ–"ಬುಕ ಅವು..?"

ಅಂವ – "ಅವು ಬುಡ್ಯೆ"

"ಅವು ಏರೆಗಾವ್ಯ ರಿಕ್ಷಡ್ ಬಾಡಿಗೆ ಇಜ್ಯಾಂದೆ ಕಿರಿ ಕಿರಿ.."

"ಉಂದು ರಗಾಳೆ ಇಜ್ಜಿ"

"ಬತ್ತ್ ನಕ್ಲೆಗ್ ಪೂರ ತೂಕ್ದ್ ತೂಕ್ದ್ ಕೊರ್ಪುನು" ಅಂತ ಹೇಳ್ತ್..

ಹಂಗೆ ಅವನೊಟ್ಟಿಗೆ ಮಾತಾಡಿ ಹೊರಗೆ ಬಂದ್ ಪಟ್ಟಾಂಗ ಹೊಡೆವ ನಮ್ಮ ಊರ್ನ ಸಣಪಂದರ ಮಾತ್‌ಗೆ ಕೆಬಿ ಕೊಡಿಕೆ ಸುರು ಮಾಡ್ದೆ.. ಯಾರೊ ಒಬ್ಬೊ ಹೇಳ್ದ ಕೇಳ್ತಿತ್. ಅಣ್ಣ ನೀವ್ಗೆ ಗೊತ್ಲೆನಣ್ಣ ನಮ್ಮ ಕಾಗಡೆ ಹೈದನ ಕತೆ..?

ಹೈದ ಕಲ್ಲಾಜೆಲಿ ಕಾಂಬಕೆ ಇಲ್ಲೆ.. ದಿನೋಳು ಆಡಿಕೆ ಬರಂವ., ಆಡಿಕೆ ಬಾದು ಬುಡಿ ಎಲ್ಲಿನು ಕಾಂಬೊಕು ಸಿಕ್ಕುಲ್ಲೆ.. ಸಿಕ್ಕಿರು ಸೆರಿಗಟ್ಟ್ ಮಾತಾಡ್ದು ಇಲ್ಲೆ ಯಾರೊಟ್ಟಿಗು.. ಅಂವ ಇಲ್ಲದೇ ಕಲ್ಲಾಜೆಲಿ ಮಕ್ಕಳಿಗೆ ಯಾರಿಗು ಕುಸಿ ಇಲ್ಲೆಪ.. ಮಕ್ಕ ಆಡ್ದರ್ನೆ ನಿಲ್ಸ್ಯೋಳ ಅಂವ ಬಾರದೆಂತ ಹೇಳ್ತಿದ್ದ.

ನಾ ಹಂಗೆ ಮಳೆ ನಿತ್ತಾಂಗೆ ಯತಿಶಂಗೆ ನಾಳೆ ಹಿಂಬೊತ್ ಕಾಣೊಮುತೇಳಿ ಮೆಲ್ಲಂಗೆ ಅಲ್ಲಿಂದ ಜಾರಿದ್ ಮನೆ ದಾರಿ ಹಿಡ್ದೆ.. ಬಾಕನ ದಾರಿಲಿ ಇಡೀ ಅವು ಅಲ್ಲಿ ಪಟ್ಟಂಗ ಹೊಡೆತಿದ್ದ ಹೈದನ ವಿಸಯನೆ ತಲೆಲಿ ಎಡ್ಗಿ ಹೋತ್ ನಂಗೆ.. ಈ ಕಾಗಡೆ ಹೈದಂಗೆ ಏನಾತಪ..

ನೋಡ ಅಂವ ಸಿಕ್ಕಲಿ ವಿಚಾರ್ಸೊಕುಂತೇಳಿಕಂಡ್ ಅಂದ್ ಮನೆಗೆ ಎತ್ತಿದೆ.

ನಿಮ್ಮೊಟ್ಟಿಗೆ ಎಲ್ಲೊದೊಕು ಸುರುಗೆ ನಮ್ಮ ಕಾಗಡೆ ಹೈದನ ಬಗ್ಗೆ ಹೇಳಿಕಣೊಕು. ಅಂವ ನಮ್ಮವನೆ.. ನಮ್ಮೂರ್ನ ಹೈದನೆ.. ಎಲ್ಲವ್ಕ ಬಾರಿ ಕುಸಿ ಅವಂತೇಳ್ರೆ.. ಎಲ್ಲವ್ಕ ಬಿಟ್ಟಿ ಚಾಕ್ರಿಗೆ ಅವನೇ ಆಕು.. ಇನ್ನೂ ಹೇಳೊಕುಂತೇಳ್ರೆ ಊರಿಗೆ ಉಪಕಾರಿ., ಮನೆಗೆ ಮಾರಿ.. ಬಾರಿ ಉರ್ಪೊದ ಕೊಳ್ಳಿ ಬೇರೆ.. ಯಾಗೊಳು ಹಲ್ಲ್ ಬುಟ್ಟ್‌ಕಂಡ್ ಕಿಟಿ ಕಿಟಿ ನೆಗಡಿಕಂಡೇ ಇರೊಂವ.. ಎಲ್ಲರೊಟ್ಟಿಗೆ ಮಾತಡಿಕಂಡ್ ಏನಾರ್ ಉಪದ್ರಮಾಡಿಕಂಡ್ ಎಲ್ಲರ ನೆಗಡ್ಸಿಕಂಡೇ ಇರಂವ ಅಂವ.. ಮೊನ್ನೆಂದ ಮಾತ್ರ ನೆಗಡ್ದು ಬುಡಿ ಮೋರೆಲಿ ಜೀವಕಳೆನೆ ಇಲ್ಲೆಗಡ.. ಕುರೆ ಸತ್ತ ಕೊರ್‌ಂಬನಾಂಗೆ ಆವ್ವಂತ ಎಲ್ಲೊವು ಹೇಳ್ತಿದ್ದೊ. ನಾ ಅಂವನೊಟ್ಟಿಗೆ ಕೇಳೊಕುಂತೇಳ್ರೆ ಅಂವ ನಂಗೆ ಇನ್ನು ಸಿಕ್ಕಿತ್ಲೆ..

ಮಾರ್ನೆ ದಿನ ಹಿಂಬೊತು ಅಂಗಡಿ ಹಕ್ಕಲೆ ಹೊರ್ಟಿದ್ದೆ.. ಪಿರಿ ಪಿರಿ ಮಳೆನು ಬರ್ತಿತ್ತ್ ನಾ ಕೊಡೆ ಇಲ್ಲದೆ ಬೀಸರ ಬೀಸರ ನಡ್ಕಂಡ್ ನಮ್ಮ ಅಗರ್ ದಾಟಿ ರೋಡುಗೆ ಇಳ್ದ್ ಹಂಞ ದೂರ ಎತ್ತೊಳೆನ ಇಲ್ಲೆನೊ.. ಸೆನಿ ಸೆನಿ ಒಸಿ ದೂರಲಿ ನಡ್ಕಂಡ್ ಹೋದು ಕಂಡದೆ.. ಬೇರೆ ಯಾರ್ ಅಲ್ಲ.. ಇದೇ ನಮ್ಮ ಕಾಗಡೆ ಹೈದ.. ಏನೆ ಆಗಲಿ ಎಲ್ಲೊವು ಹೇಳ್ದೊರ ಕೇಳಿದ್ದೆ ನಮ್ಮ ಹೈದ ಯಾರೊಟಿಗೆ ಮಾತಾಡ್ತಿಲ್ಲೆ ಗಡಂತ. ಏನೆ ಆಗಲಿ ಸಿಕ್ಕಿದ್ ಒಳ್ಳೆದಾತ್. ಒಮ್ಮೆ ಅವನೊಟ್ಟಿಗೆ ಕೇಳಿ ಬುಡೊಮು ಯಾವ ಪೀಡೆ ಸೋಂಕಿಟುಂತ ಹೇಳಿ, ಅವನ ಕೂಕುಳ್ ಹಾಕಿ ಕರ್ದೆ..... ಅಂವ ಹೈದ ಹಿಂದೆ ತಿರ್ಗಿ ನನ್ನ ನೋಡಿ ಅಲ್ಲೆ ನಾ ಬರ್ಲಿಂತ ನಡ್ಗೆನ ಮೆಲ್ಲಂಗೆ ಮಾಡ್ತ್. ನನ್ನ ನೋಡ್ರೆ ಕಲ್ಲ್ ಹೊಡ್ದ್ ಮಾತಾಡ್ಸಂವ. ಇಂದ್ ನನ್ನ ನೋಡಿ ನೋಡದವರಾಂಗೆ ಒಂದ್ ಸಣ್ಣ ನೆಗೆ ನೆಗಡ್ತ್. ಮತ್ತೆ ಒಸಿ ಹೊತ್ತ್ ಅದ್ ಇದ್ ಮಾತಾಡಿ ಅಂವ ಯಾಕೆ ಹಿಂಗಾತ್‌ಂತ ಸಣ್ಣ ಉರ್ಲ್‌ ಕಿಣಿ ಮಾಡಿ ವಿಚಾರ್ಸಿಕೆ ಸುರು ಮಾಡ್ದೆ.. ಸುರುಗೆ ಅವ

ಬಾಯೇ ಬುಟ್ಟತ್ಲೆ.. ಅಕೇರಿಗೆ ಏನಾರ್ ಮಾಡಿ ಬಾಯಿಬುಡಿಕೆ ಸುರು ಮಾಡ್ತ್..

"ಅಣ್ಣ ನೀವು ಯಾರೊಟಿಗೆ ಹೇಳ್ದುಲೆಂತೇಳ್ರೆ ನಾ ಎಂತ ಆದ್‌ಂತ ವಿಸಯ ಹೇಳ್ನೆ. ಆದರೆ ನೀವು ದಮ್ಮಯ ಯಾರೊಟಿಗೆ ಹೇಳಿಕೆ ಬೊತ್ತ್‌ಂತ ಹೇಳ್ತ್".. ಅಕ್ಕ್ ಮಾರಯ ಯಾರೊಟಿಗೆ ಹೇಳ್ದುಲೆತೇಳ್ದೆ.. ಮತ್ತೆ ವಿಷಯ ಹೇಳಿಕೆ ಸುರು ಮಾಡ್ತ್.

ಆಗೊಳ್ದ್ ಇಸ್ಟೆ ಎಲಿ ಹೋದು.... ಇಂವ ಮಾಡ್ದು ನೋಡ್ರೆ ಹುಲಿ ಹೋದಾಂಗೆ ಮಾಡ್ತುಟ್ಟು. ಅಣ್ಣ ಒಂದ್ ಆರ್ ತಿಂಗಳ್ಗೆ ಮುಂದೆ ನಂಗೊಂದು ಫೇಸ್ಬುಕ್ಕ್‌ಲಿ ಗೂಡೆ ಪರ್ಚಯ ಆತ್.. ಬಾರಿ ಲಾಯ್ಕ್‌ನ ಗೂಡೆಣ್ಣ. ಬಾರಿ ಲಾಯ್ಕ್‌ಂತೇಳ್ರೆ ಬಾರಿ ಒಳ್ಳ ಗೂಡೆ..

ಸುರುಗೆ ಫೇಸ್ ಬುಕ್ಕುಲಿ ಪರ್ಚಯ ಆತ್. ಸ್ವಲ್ಪ ದಿನ ಕಳ್ದಾಂಗೆ ಅವು ನಾವ್ಗೆ ನೆಂಟ್ರ್.. ಇವು ನೀವ್ಗೆ ನೆಂಟ್ರಾತ ಪರ್ಚಯ ಬಾರಿ ಹಕ್ಕಲೆ ಆತ್... ಪರ್ಚಯ ಮಾತ್ ಆತ್. ಮಾತ್‌ಗಂಟೆಗಟ್ಲೆ ಮಾತ್ ಆತ್. ಗಂಟೆಗಟ್ಲೆ ಹೋಗಿ ಹಗ್ಲಿರ್ಲ್ ಪೂರ ಮಾತಾಡ್ವಾಂಗೆ ಆತ್.. ಹಗ್ಲಿರ್ಲ್ ಮಾತಾಡಿ ಎದ್ರೆದ್ರ್ ಸಿಕ್ಕಿದ್ ಮಾತಾಡ್ವಲ್ಯೊರೆಗೆ ಎತ್ತಿತ್. ಈ ಮಾತ್ ಎಲ್ಲ ಅವರ ಮನೆವ್ಕೆ ಗೊತ್ತಾತ್.. ಮನೆವರ್ದ್ ಒಂದೆ ಹಠ "ಅಣ್ಣ ನೀ ನಮ್ಮ ಮಗಳ ಮೊದ್ವೆ ಆಗ್ಲೇ ಬೇಕುಂತ.." ಏನ್ ಮಾಡ್ದು ನಾ.. ಅಡ್ಚಿಲ್ಲಿ ಬಿದ್ದಾಂಗೆ ಆತ್ ನಂಗೆ. ನೀವ್ಗೇ ಗೊತ್ತುಟಲ ಅಣ್ಣ ನಾ ನಮ್ಮಪ್ಪಂಗೆ ಎಸ್ಟ್ ಹೆದ್ರಿನೆಂತ.. ಹಂಗೆ ನಂಗೆ ಮನೆಲಿ ಹೇಳಿಕೆ ಹೆದ್ರಿಕೆನು ಒಂದಿತ್ತ್. ಇನ್ನ್ ಕಾದರೆ ಆಕಿಲೆಂತೇಳಿ...

ಉಪಾಯ ಇಲ್ಲದೆ ಒಳ್ಳ ಘಳ್ಗೆ ನೋಡಿ ಮನೆಲಿ ಅಪ್ಪನ ಒಬ್ಬೊನ ಬುಟ್ಟು ಎಲ್ಲೊವ್ಕ ಹೇಳ್ಯೆ ಬುಟ್ಟೆ.. ಎಲ್ಲೊವು ಅಂಡೆಲಿ ಇಲ್ಲೆ ಅಳೆಗೆಲಿ ಇಲ್ಲೆಂತೇಳ್ವಾಂಗೆ ನೂರೆಂಟ್ ಮಾತೆಲ್ಲ ಹೇಳಿ, ಕಡೇಗೆ ಒಪ್ಪಿದ.. ಇನ್ನ್ ಎಂತ ಮಾಡ್ದು ಮನೆವ್ಕೆ ಎಲ್ಲವ್ಕ ಹೇಳಿ ಆತ್. ಅಪ್ಪನ ಒಪ್ಪುಸದೆ ಹೇಂಗೆಂತೇಳಿ ಧೈರ್ಯ ಮಾಡಿ ಅಪ್ಪನೊಟ್ಟಿಗು ಹೇಳಿ ಬುಟ್ಟೆ.

ಈ ನನ್ನ ಕತೆ ಎಲ್ಲ ಅಪ್ಪಂಗೆ ಗೊತ್ತಾಗಿ ಅಪ್ಪಂದ್ ಒಂದೇ ಮಾತ್. **ನೀವ್ಗೆಲ್ಲ ತಿಂದದ್ ಕುತ್ತಿಸಿದೆ ಕಂಡದೆ.. ನೀವ್ಗೆಲ್ಲ ಪೆಟ್ಟ್ ಹೆದ್ರಿಕೆ ಇಲ್ಲದೆ ಅಲ ಹಿಂಗೆಲ್ಲ ಮಾಡ್ದು.. ನಿಮ್ಮ ಮೊಬೈಲ್‌ಂದಾಗಿ ಅಲ ಇಸ್ಟೆಲ್ಲ.. ನಿಮ್ಮ ಫೆಸ್‌ಬುಕ್ಕ್‌ಗೆ ಇಸ್ಟ್ ಕಿಚ್ಚಿ ಹೆಟ್ಟಿಕೆ**

ಲೌ ಮ್ಯಾರೆಜ್ ಆದ್ಯ..?

ಬೇಡವೆ ಬೇಡಂತ ಅಪ್ಪ ಗಡಿಗೆ ಕಲ್ಲ್ ಇಸಿದಾಂಗೆ ಹೇಳಿ ಬುಟ್ಟೊ, ತೇಳಿಕಂಡ್ ಹೈದ ಜೋರು ಮರ್ಡಿಕೆ ಸುರು ಮಾಡ್ತ್.

ಮರ್ಕಂಡ್ ಅಳ್ಗಿಲ್ ತಡ್ಕಂಡ್ ಪುನ ಹೇಳ್ತ್. "ನಾ ಎಂತ ಮಾಡೊಕಣ್ಣ. ಗೂಡೆನ ಬುಡ್ವಾಂಗಿಲ್ಲೆ ಅಪ್ಪನ ಮಾತ್ ಮೀರ್ವಾಂಗೆ ಇಲ್ಲೆ.. ಸುಟ್ಟೇ ಹೋಗಲಿಂತ ಮನೆಲಿ ಜಾತಕ ನೋಡ್ಸಿಯಳ ಕೂಡಿ ಬಾದುಲೆ.. ಹಂಗೆ ಮನೆಲಿ ಒಪ್ಪುಲ್ಲೆಂತೇಳಿ ಗೂಡೆನೊಟ್ಟಿಗೆ ಸುಳ್ಳು ಹೇಳಿ ಬುಟ್ಟೆಣ್ಣ..."

ಗೂಡೆ ನಾ ಮೋಸಮಾಡ್ದವಂತ ನನ್ನ ಸಿಟ್ಟ್‌ಲಿ ನೋಡ್ದೆ.. ಮನೆವು ನೋಡ್ರೆ ನಾ ಲೌ ಮಾಡ್ದವಂತ.. ನನ್ನ ಒಳ್ಳ ಬಾಳ್ ಕತ್ತಿ ಹಿಡ್ದ್ ಮೊನ್ಸರ ಕೊಂದ್ ಬಂದವರಾಂಗೆ ನೋಡ್ವೆ.. ಎಂತ ಮಾಡ್ದಣ್ಣ ನನ್ನ ಮೊರ್ಯಾದಿ ಪೂರ ಹೋತ್‌ಂತೇಳಿ ಜೋರ್ ಮರ್ಡಿಕೆ ಸುರುಮಾಡ್ತ್..

ನಂಗೆ ನೋಡಿ ಪಾಪನೇಂತ ಅನ್ಸಿತ್...

ಎಂತ ಮಾಡ್ದು.. ಮರ್ಡ್‌ಬೇಡಣ್ಣ ನಿನ್ನ ತಪ್ಪು ಏನಿಲ್ಲೆಣ್ಣ ಇದರ್ಲಿ.. ಕರ್ಣನಾಂಗೆ ಆಗಳಣ್ಣ ನೀ ಅಸ್ಟೆ.. ಬೇಜರ್ ಮಾಡ್ಬಡ ನಿಂಗೆ ಲಾಯ್ಕ್ನ ಒಳ್ಳೆ ಗೂಡೆ ಸಿಕ್ಕುದು ಒಳ್ಳದಾಗಲಿಂತ ಹೇಳಿ ಸಮದಾನ ಮಾಡ್ದೆ.. ಆದರು ಅಂವ ಕೇಳಿಕೆ ಎಲ್ಲಿ ತಯಾರುಟ್ಟು.. ಗೂಡೆ ಸಿಕ್ಕುದು ಹೌದಣ್ಣ ಅದ್ ನಂಗು ಗೊತ್ತುಟು.. ಆದರೆ ನಂಗೆ ಗೂಡೆನ ಮತ್ತು ನನ್ನ ಮನೆವರ ಎದ್ರ್ ಹೋದ ನನ್ನ ಮೊರ್ಯಾದಿ ಸಿಕ್ಕಿದೆನಾಂತ ಹೇಳಿ ನನ್ನ ಬುಟ್ಟು ಸೀದಾ ಮುಂದೆ ಮುಂದೆ ನಂಗೆ ಕಾಯದೆ ಹೋಗ್ಯೇ ಬುಟ್ಟಿತ್.

ನಂಗು ಅವ ಹೇಳ್ದ್ ನೆನ್ಸಿ ಪಾಪನೆಂತ ಆತ್. ಅಂವ ಹೇಳ್ದರ್ಲು ಸತ್ಯ ಉಟ್ಟು. ಪಾಪ ಅವನ ಹೋದ ಮೊರ್ಯಾದಿಗೆ ಬೆಲೆನೆ ಇಲ್ಲೆ ಅಲ.

ಅವಂಗೆ ಬೇರೆವರಾಂಗೆ ಓಡಿ ಹೋಗಿ ಮೊದ್ವೆ ಆಕಯ್ತ್. ಆದರೆ ಅಂವ ಹಂಗೆ ಮಾಡ್ತ್ಲೆ. ಮನೆವು ಹೇಳ್ದಾಂಗೆ ಕೇಳ್ತ್.. ಈಗ ಗೂಡೆನ ಎದ್ರ್ ಅಂವ ಕೆಟ್ಟಂವ.. ಮನೆವರ ಎದ್ರ್‌ನು ಕೆಟ್ಟಂವ. ಇಬ್ಬೊರ ನೊಡುಲಿನು ಮೊರ್ಯಾದಿ ಹೋತ್.. ಎಂತ ಮಾಡ್ದು ಅಂವನ ದೆಸೆನೇ ಸರಿಲ್ಲೆಕಂಡದೆಂತ ನೆನ್ಸಿಕಂಡೆ ನಾ..

ಹಂಗೆ ಅವನ ಪರಿಸ್ಥಿತಿ ನೋಡುಕನೆ ನಂಗೆ ನಮ್ಮ ಸಣ್ಣ ಪಂಡ್ ಹೇಳ್ದ ಒಂದು ಉರ್ದುಲಿ ಇರುವ ಪಂಡ್‌ನ ಕತೆ ನೆಂಪಾತ್.. ಇವನ ಪರಿಸ್ಥಿತಿಗೆ ಹೇಳಿ ಮಾಡ್ಸಿದಾಂಗೆ ಇರ್ವ ಕತೆ.

"ಭಾಯ್ ನೈ ಪೀಯಾ, ನೈ ಗ್ಲಾಸ್ ಥೋಡ, ಪಂದ್ರಾನೇ" ಅಂತ.

ಬೊಂಬಾಯ್ಲಿ ಎಲ್ಲ ಹೋಟ್ಲ್‌ಗೆ ಹೋದರೆ ತಿಂದ ಮೇಲೆ ಬಿಲ್ ಬರ್ದ್ ಕೊಡ್ದುಲೆ.. ಕೌಂಟರ್ ಹಕ್ಕಲೆ ಹೋದರೆ ಆತ್ ಒಳಗೆಂದ ಸಪ್ಲೈಯ್ರ್ ಕರ್ದ್ ಹೇಳ್ದೆ ಗಿರಾಕಿ ಏನೆಲ್ಲ ತಿಂದುಟು ಎಸ್ಟಾತ್‌ಂತ..

“ದೋ ಸಮೋಸ, ಛಾಯ್ ಬೀಸ್ ರುಪಾಯ್”ತೇಳಿ.

ಅದೇ ತರ

ಒಬ್ಬ ಗಿರಾಕಿಗೆ ಸಪ್ಲೈಯ್ರ್ ಕುಪ್ಪಿ ಗ್ಲಾಸ್ಲಿ ಬೆಚ್ಚ ಬೆಚ್ಚ ಚಾಯ ತಂದ್ ಕೊಡುಕನ ಇವಂಗೆ ಗ್ಲಾಸ್ ಹೊತ್ತಿ ಸುಡ್ದರ್ಲಿ ಗ್ಲಾಸ್ ಕೈ ಜಾರಿ ಬಿದ್ದ್ ಹೊಡಿ ಆದೆ. ಗಿರಾಕಿ ಸುಟ್ಟೇ ಹೋಗಲಿಂತ ಎದ್ದ್ ಪೋಯಿಂತ ಹೊರಗೆ ಹೊರ್ಟದೆ. ಕೌಂಟರ್ ಹಕ್ಕಲೆ ಹೋಕನ ಒಳಗೆಂದ ಸಪ್ಲೈ ಕರ್ದ್ ಹೇಳ್ದೆ.. “ಏನ್ ತಿಂತ್ಲೆ.., ಏನ್ ಕುಡ್ತ್ಲೆ.. ಒಂದ್ ಗ್ಲಾಸ್ ಕೆಡ್ಗಿ ಹೊಡಿ ಮಾಡಿಟು. ಹೊಡಿಯಾದ ಗ್ಲಾಸ್ದ ಹದ್ನೈದ್ ರೂಪಾಯಿಂತ್..”

ಪಾಪ ಚಾಯನು ಕುಡ್ತ್ಲೆ ಎಂತ ಇಲ್ಲೆ., ಸಪ್ಲೆಯ್ರ್‌ನ ತಪ್ಪುಗೆ ಇಂವ ದುಡ್ಡು ಕೊಟ್ಟು ಬಾತ್. ಏನ್ ಸುಖ ಉಟ್ಟು ಇವಂಗೆ..?

ಹಂಗೆ ಆವ್ಟು ನಮ್ಮ ಹೈದನ ಪರಿಸ್ಥಿತಿ. ಇವ ಏನ್ ತಪ್ಪೂ ಮಾಡ್ತ್ಲೆ. ಇವಂಗೆ ಏನ್ ಕುಸಿನು ಸಿಕ್ಕಿತ್ಲೆ. ಇಂವ ಒಬ್ಬ ತೆಗ್ದಾಕಿದವಂತ ಹೆಸರ್ ಮಾತ್ರ ಸಿಕ್ಕಿದಸ್ಟೆ ಇವಂಗೆ..

✍ ಕಾರ್ತಿ ಪದೇಲ

## “ಹಿಂಗಾರ” ಚಂದಾದಾರರ ತಿಳಿವಳಿಕೆಗೆ

ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಡೆಂದ ಪ್ರಕಟ ಆಗ್‌ವ ‘ಹಿಂಗಾರ’ ಪತ್ರಿಕೆನ ಎಲ್ಲವು ತುಂಬ ಅಭಿಮಾನಂದ ತಕಂಡ್ ಪ್ರೋತ್ಸಾಹಿಸೊಕು. ನೀವೆಲ್ಲವು ಅದರ ಸದಸ್ಯತ್ವ ಪಡ್‌ಕಣೊಕು. ಅದರ ತ್ರೈವಾರ್ಷಿಕ ಚಂದಾ ದರ ರೂ. 200.00 ಆಗುಟು. ಬಿಡಿ ಪತ್ರಿಕೆಗೆ ರೂ. 20.00. ಸದಸ್ಯರಾದವುಕೆ ಪತ್ರಿಕೆನ ಅಂಚೆಲಿ ಕಳ್ಸಿವೆ. ನಿಮ್ಮ ಪರಿಚಯಿಸ್ತರಿಗೆ ಸದಸ್ಯರ್ ಆಕೆ ದಯಮಾಡಿ ಹೇಳಿ. ಆಜೀವ ಸದಸ್ಯತ್ವಕ್ಕೆ ರೂ. 600.00

# ಇದ್ ಕಥೆ ಅಲ್ಲ, ಬದ್‌ಕ್

ಒಂದ್ ಸಣ್ಣ ಹಳ್ಳಿ. ಆ ಹಳ್ಳಿಲಿ ಒಂದ್ ಮುಗ್ದ ಗೂಡೆ ಮತ್ತೆ ಅವಳ ಅಮ್ಮ ಬದ್‌ಕಂಡ್ ಇದ್ದ. ಆ ಗೂಡೆನ ಹೆಸರ್ ಧನ್ಯ. ಅವಳಿಗೆ 4 ಜನ ಮಾವನವು ಇದ್ದ. ಆದರೆ ಅವ್ ಇದ್ದ್ ಕೂಡ ಪ್ರಯೋಜನವಿಲ್ಲೆ. ಧನ್ಯ ಮತ್ತೆ ಅವಳ ಅಮ್ಮ ಸಣ್ಣ ಮನೆಲಿ ಸುಖ ಸಂತೋಷಂದ ಯಾರ ಹಂಗಿಲ್ಲದೇ ಬದ್‌ಕ್ತಿದ್ದ.

ಧನ್ಯನ ಶಾಲೆಗೆ ಸೇರ್‌ಸಿದ, ಧನ್ಯ ಓದಿಕೆ ಫಸ್ಟ್ ಇತ್ತ್. ಧನ್ಯನ ಆಚೆ ಮನೆವು ದೊಡ್ಡ ಕುಟುಂಬದವು ಆಗಿದ್ದೊ. ಅಲ್ಲಿ ಒಂದ್ ಗೂಡೆ ದೀಪಾ ಎಂಬವಳ್ ಇತ್ತ್. ದೀಪಾ ಧನ್ಯ ಹೋವ ಶಾಲೆಲಿ ಕಲೆತಿತ್. ಇವಿಬ್ಬರ್ ಒಟ್ಟಿಗೆ ಶಾಲೆಗೆ ಹೋತಿದ್ದೊ. ಮತ್ತೆ ಒಳ್ಳೆಯ ಫ್ರೆಂಡ್ಸ್‌ಗ ಆದ. ಇವಿಬ್ಬರೂ 7ನೇ ಕ್ಲಾಸ್‌ಲಿ ಇರಕಾದರೆ ಇವರಿಬ್ಬರ ಮಧ್ಯೆ ಜಗಳ ಸುರ್ ಆತ್, ಇವಿಬ್ಬರೂ ಬೇರೆ ಬೇರೆ ಆದ. ಧನ್ಯ ಗೂಡೆ ಯಾರಿಗೂ ಎಂಥ ಹೇಳುವ ಗೂಡೆ ಅಲ್ಲ. ಆದರೆ ಧನ್ಯಂಗೆ ಮಾತ್ರ ಯಾರಾರ್ ಎಂಥಾರ್ ಹೇಳಿರೆ ಕಣ್ಣ್‌ಲಿ ನೀರ್ ಬೇಗ ಬಂದದೆ. ಹೇಂಗಾರ್ ಮಾಡಿ ಧನ್ಯ ಎಸ್.ಎಸ್.ಎಲ್.ಸಿ. ಫಸ್ಟ್ ಕ್ಲಾಸ್‌ಲಿ ಮುಗ್‌ಸಿತ್. ಇಲ್ಲಿ ಮುಟ್ಟ ಕಲ್‌ಸಿಕೆ ಧನ್ಯನ ಅಮ್ಮ ತುಂಬಾನೇ ಕಷ್ಟಪಟ್ಟ. ಕಲಿಕೆ ಫಸ್ಟ್ ಇದ್ದರ್‌ಂದ ಅವಳ ಅಮ್ಮಂಗೆ ಮನೆಲಿ ನಿಲ್ಸಿಕೆ ಮನ್‌ಸಿತ್ಲೆ. ಹೇಂಗಾರೂ ಮಾಡಿ ನನ್ನ ಮಗಳ ಓದ್‌ಸೋಕುತ ತುಂಬಾ ಕಷ್ಟಪಟ್ಟ. ಎಸ್.ಎಸ್.ಎಲ್.ಸಿ. ಮುಗ್‌ದ್ ಕಾಲೇಜಿನ ಮೆಟ್ಟಿಲ್ ಹತ್ತಿತ್ ಧನ್ಯ. ಆದರೆ 'ದೀಪಾನೂ ಅದೇ ಕಾಲೇಜ್ ಸೇರ್ತ್. ಹೈಸ್ಕೂಲ್‌ಲಿ ಬೇರೆ ಬೇರೆಯಾದ ಇವಿಬ್ಬರ್ ಪಿ.ಯು.ಸಿ. ಲಿ ಅದೇನೊ ಗೊತ್ತಿಲ್ಲೆ ಧನ್ಯ ಮತ್ತೆ ದೀಪಾ ಇಬ್ಬರ್ ಒಳ್ಳೆಯ ಫ್ರೆಂಡ್ಸ್‌ಗಾದೊ. ಹಿಂಗೆ ಇರಕಾದರೆ ಒಂದ್ ದಿನ ಧನ್ಯನ ಅಮ್ಮಂಗೆ ದೊಂಡೆ ಬೇನೆ ಸುರು ಆತ್. ಆದರೆ ಅವಳ ಅಮ್ಮ ಅದರ ಲೆಕ್ಕಕ್ಕೆ ತಕಂತ್‌ಲ್ಲೆ. ಚೂರ್ ದಿನ ಕಳ್‌ದ ಮೇಲೆ ಡಾಕ್ಟರ್ ಹಕ್ಕಲೆ ಹೋಕಾನ ಗೊತ್ತಾತ್, ಅದ್ ಬರೀ ದೊಂಡೆ ಬೇನೆ ಅಲ್ಲ ಕ್ಯಾನ್ಸರ್‌ತ. ಆದರೂ ಕೂಡ ಆ ವಿಷಯ ಧನ್ಯಂಗೆ ಗೊತ್ತಾತ್‌ಲೆ. ಧನ್ಯನ 4 ಜನ ಮಾವಂದರ್‌ಗೆ ಗೊತ್ತಿದ್ದರ್ ಕೂಡ ಅದಕ್ಕೆ ಸರಿಯಾಗಿ ಮದ್ದ್ ಮಾಡದೇ, ಮಾರಣಾಂತಿಕ ರೋಗ ಜೋರಾತ್. ಆಪರೇಷನ್ ಮಾಡಿ ಮೂಗಿಗೆ ಪೈಪ್ ಹಾಕಿದ. ಇದರ ನೋಡಿ ಧನ್ಯ ಕಂಗಾಲಾಗಿ ಹೋತ್, ಇದರ್‌ಂದ ಆಗಿ ಏನು ಮಾಡೋಕುತ ಗೊತ್ತಾತ್ಲೆ. ಹೀಂಗಾಗಿ ಅವಳ್ ಕಾಲೇಜಿಗೆ ಕೂಡ ವಾರಕ್ಕೊಮ್ಮೆ ಹೋತ ಇತ್ತ್. ಆದರೆ ಅವಳ ಬೇನೆನ ಅವಳ ಪ್ರಾಣಸ್ನೇಹಿತೆಯಾದ ದೀಪಾಂಗೆ ಮಾತ್ರ ಹೇಳಿತ್.

ಧನ್ಯ ತುಂಬಾ ಬೇನೆ ಅನುಭವಿಸ್‌ತ್ತಿತ್. ಜೀವಕ್ಕೆ ಜೀವ ಕೊಟ್ಟ ಅವಳ ಅಮ್ಮಂಗೆ ಹುಷಾರಿಲ್ಲಿತೇಳಿಕಾನ ಅವಳಿಗೆ ಹೇಂಗೆ ಆಗ್‌ಬಡ, ಅಲ?? ಧನ್ಯ ಮನೆಕೆಲಸ ಎಲ್ಲ ಮಾಡಿ ಅಮ್ಮನ ತುಂಬಾ ಲಾಯಿಕ್ ನೋಡಿಕನ್‌ತ್. ಹಿಂಗೆ ಇರಕಾದರೆ ಧನ್ಯಳ ಅಮ್ಮ ದೇವರ ಪಾದ ಸೇರ್‌ದ. ಪಾಪ! ಧನ್ಯ ಒಂದೇ ಆತ್. ಹಿಂಗೆ ಎಲ್ಲ ಅಮ್ಮನ ಕಾರ್ಯನ ಮುಗ್‌ಸಿತ್. ಧನ್ಯನ ಅವಳ ಮಾವ ನೋಡಿಕಣ್‌ತ್ತಿದ್ದ. ಅವುಕೆ ಮೊದ್‌ವೆ ಆತ್ಲೆ. ಕೆಲ ದಿನದ ಮತ್ತೆ ಅವಳ ಮಾವಂಗೆ ಮೊದ್‌ವೆ ಆತ್. ಅಲ್ಲಿವರೆಗೆ ಅವಳ ಲಾಯಿಕ್ ಬಂಗ ಬರ್‌ಸ್‌ತ್ತಿದ್ದ. ನಂತರ ಅವಳ ಮಾವಂಗೆ ಒಂದ್ ಕೂಸ್ ಆತ್. ಧನ್ಯ ಕಾಲೇಜಿಗೆ ಹೋವ ಗೂಡೆ ಆದರೂ ಅವಳ ಪಿ.ಯು.ಸಿ. ರಜೆ ಇರಕಾದರೆ ಬೇರೆಯವುಕೆ ದತ್ತಾಗಿ ಕೊಟ್ಟ, ಮಾವನ ಕಿತಾಪತಿಂದ ಧನ್ಯ ಗೂಡೆ ಬೇರೆವರ ಮನೆ ಸೇರಾಕಾತ್. ಎಲ್ಲ ವಿಷಯಕ್ಕೆ ತಲೆ ಅಲ್ಲಾಡ್‌ಸುವ ಪರಿಸ್ಥಿತಿ ಧನ್ಯಂದ್ ಆಗಿತ್ತ್. ಧನ್ಯ ಮಾವನ ಮನೆಲಿ ಕೂಡ ಸುಖ ಕಂಡತ್ಲೆ. ಇನ್ನಾರ್ ಸುಖ ಕಾಣಕ್‌ತ ಆಸೆಂದ ಬೇರೆವರ ಮನೆ ಸೇರ್ತ್. ಆದರೆ ಅಲ್ಲಿ ನಡ್‌ದದ್ದೇ ಬೇರೆ. ಅಲ್ಲಿ ಗಂಡ-ಹೆಣ್ಣ್ ಮಾತ್ರ ಇದ್ದದ್. ಅಲ್ಲಿ ಇವಳ 2 ದಿನ ಲಾಯಿಕ್ ನೋಡಿಕಂಡ. ಮತ್ತೆ ಇವ್‌ಳಿಗೆ ಮಾನಸಿಕ ತೊಂದರೆ ಕೊಡಿಕೆ ಸುರ್ ಮಾಡ್ದ. ಆದರೆ ಇವಳ ಅದೃಷ್ಟ ಏನೋ ಗೊತ್ತೆ ಇವಳ ಮಾವನವು ಇವಳ ದತ್ತಾಗಿ ಕೊಡಿಕೆ ಮುಂದೆ ಪದವಿ ಶಿಕ್ಷಣಕ್ಕೆ ಸೇರ್‌ಸಿದ್ದ. ಪದವಿ ಶಿಕ್ಷಣಲಿ ಧನ್ಯ ಮತ್ತು ದೀಪಾಳ ಸ್ನೇಹ ಲವ-ಕುಶರಂಗೆ ಮುಂದ್‌ವರ್‌ಕಂಡ್ ಇತ್ತ್. ಅಲ್ಲಿ ಮತ್ತೊಬ್ಬಳ ಪರಿಚಯ ಆತ್. ಅವಳ ಹೆಸರ್ ನಮಿತಾ. ಇವಳೊಟ್ಟಿಗೆ ಕಾಲೇಜ್‌ಲಿ ಸ್ನೇಹ ಹೊರ್‌ತ್, ಕಾಲೇಜಿಗೆ ಹೋಗಿ ಬಾವ ಸಮಯಲಿ ಅಷ್ಟೊಂದ್ ಸ್ನೇಹವಿತ್ಲೆ. ದೀಪಾ ಮತ್ತೆ ನಮಿತಾ ಒಂದೇ ಬಸ್‌ಲಿ ಹೋಗಿ ಬಂದ್‌ಕಂಡ್ ಇದ್ದ. ಆದರೂ ಕೂಡ ನಮಿತಾ ಧನ್ಯಂಗೆ ಕಾಯತಿತ್ಲೆ. ದೀಪಾ ಧನ್ಯಂಗಾಗಿ ಕಾಲೇಜಿಗೆ ಎಷ್ಟ್ ಲೇಟಾದರ್ ಕಾಯತ್ತಿತ್ತ್. ಒಂದ್ ದಿನ ಕೂಡ ಅವಳ ಬುಟ್ ಬಂದತ್ತ್‌ಲ್ಲೆ. ಧನ್ಯಂಗೆ ಸ್ವಲ್ಪರೂ ಖುಷಿ ಕೊಟ್ಟದ್ ಆ ದೀಪಾ ಅಲ್ಲ ಸ್ನೇಹತೇಳಿರೆ ಹೀಂಗಿರೊಕು. ಪದವಿ ಮುಗ್‌ಸಿತ್ ಧನ್ಯ. ಮತ್ತೆ ಧನ್ಯ ಮನೆಲಿನೇ ಇದ್ದ್ ತನ್ನ ಕೆಲಸನ ಮಾಡಿಕಂತ್. ಧನ್ಯ ಪದವಿ ಪಡ್‌ದರೂಸ ಅವಳಿಗೆ ಏನೂ ಉಪಕಾರ ಇಲ್ಲೆ ಕಾರಣ ಮನೆಲಿ ಕೆಲಸಕ್ಕೆ ಹೋಕೆ ಬುಡ್ದುಲೆ. ಎಂಥ ವಿಚಿತ್ರ ಜನ ಒಳ ಅಲ.... ಇಷ್ಟ್ ವಿಚಿತ್ರ ಜನಗಳೊಟ್ಟಿಗೆ ಆ ಧನ್ಯನ ಬದ್‌ಕ್ ಹೋಕಂಡ್ ಉಟ್ಟು ಅಲ... ಇನ್ನಾರ್ ಧನ್ಯನ ಬದ್‌ಕ್ ಸುಖಮಯವಾಗಲಿತ ಆಸಿಸಮೊ.

✍ ಭವ್ಯಶ್ರೀ ಕೆ.ಬಿ.

ಜನಪದ ಕತೆ

# ಆರ್ ಜನ ಅಣ್ಣಂದ್ರ ಮುದ್ದ್‌ನ ತಂಗೆ

ಪಂಡ್‌ನ ಕಾಲಲಿ ಒಂದು ಊರ್‌ಲಿ ಒಬ್ಬ ರಾಜರಾಣಿ ದಂಪತಿಗ ಇದ್ದೊ. ಆ ದಂಪತಿಗಳಿಗೆ ಆರ್ ಗಂಡ್, ಒಂದ್ ಹೆಣ್ಣ್ ಏಳ್ ಜನ ಮಕ್ಕ ಇದ್ದೊ. ಆ ಮಕ್ಕೆಲ್ಲ ಬೆಳ್‌ದ್ ದೊಡ್ಡವಾದೊ, ಮಕ್ಕಳ್ನೆಲ್ಲ ಸಾಕಿಕಂಡ್ ಕುಸಿಂದ ರಾಜ್ಯಭಾರ ಮಾಡ್‌ತ್ತಿದ್ದ ರಾಜ ರಾಣಿಗೆ ಏನೋ ದೊಡ್ಡ ಕಾಯಿಲೆ ಬಂದ್ ಸತ್ತ್ ಹೋದವೆ.

ಈಗ ಆರ್ ಜನ ಅಣ್ಣಂದ್ರ್‌ವಟ್ಟಿಗೆ ತಂಗೆನು ಯೌವನಾವಸ್ಥೆಗೆ ಬಾತ್. ತಂಗೆನ ಮದ್ವೆ ಮಾಡ್ವ ಭಾರ ಅಣ್ಣಂದ್ರದ್. ಬಾರಿ ಅಂದ ಚಂದದ ಪೊರ್‌ಲುನ ಗೂಡೆ ತಂಗೆ ರಾಜಕುಮಾರಿ. ಅವಳ ಅಂದ ಚಂದಕ್ಕೆ ತಕ್ಕಂಗೆ ಅವಳ ಸಿಂಗಾರ ಮಾಡಿಕೆ ಮುತ್ತು ಹವಳ ಚಿನ್ನ ವಜ್ರ ವೈಡೂರ್ಯ ಇದೆಲ್ಲ ಬೇಕಲ್ಲ. ಹಂಗೇ ಅಣ್ಣಂದ್‌ರ್ ಇದರೆಲ್ಲ ತಕಬರೋಕು. ತಂಗೆನ ಮನೇಲಿ ಒಬ್ಬ ಬುಟ್ಟ್ ಹೋಕು. ಏನ್ಮಾಡ್‌ದುತ ಗ್ಯಾನ ಮಾಡ್‌ವೆ. ಒಂದ್ ಉಪಾಯ ಹೊಳ್‌ದದೆ, ಅರಮನೆ ಸುತ್ತ ಇರ್ವ ತೆಂಗಿನ ಮರ, ಬಾಳೆಗಿಡ ಹಲ್‌ಸ್‌ನ ಮರ, ಮಾವುನ ಮರ, ಗಿಣಿ ಕೋಗಿಲೆಗಳ್ನ ಕರ್‌ದ್ "ನಾವು ತಂಗೆಗೆ ಚಿನ್ನ, ಮುತ್ತು, ಹವಳ ತಾಕೆ ಹೋದವೆ. ಯಾರ್ ಬಂದ್ ಕರ್‌ದರು ನೀ ಬಾಗ್‌ಲ್ ತೆಗಿಬೇಡ. ನಾವು ಮುತ್ತು, ಹವಳ, ಚಿನ್ನ, ವಜ್ರ, ವೈಡೂರಿಯ ತಂದೊಳೊ. ತಂಗೆ ಬಾಗ್‌ಲ್ ತೆಗಿತ ಹೇಳ್‌ವೆ. ಆಗ ಮಾತ್ರ ನೀನ್ ಬಾಗ್‌ಲ್ ತೆಗಿಯೋಕು, ಮತ್ತೆ ಯಾರ್ ಬಂದ್ ಕರ್‌ದರು ಬಾಗ್‌ಲ್ ತೆಗಿಬಡ"ಂತ್ಹೇಳಿ ಒಬ್ಬೊಬ್ಬ ಅಣ್ಣಂದ್‌ರ್ ಒಂದೊಂದು ದಿಕ್ಕ್‌ಗೆ ಹೋದವೆ.

ಆ ಊರ್‌ಲಿ ತಾಟ್‌ಕೆಂತ್ಹೇಳುವ ಒಂದು ರಾಕ್ಷಸಿ ಅಜ್ಜಿ ಇತ್ತ್. ಅದ್ ಅರಮನೆ ಹಿಂದೆ ಅಣ್‌ಗಿ ಕುದ್ದ್‌ಕಂಡ್ ಇವರ ಮಾತ್‌ಗಳ್ನ ಕೇಳ್‌ಸಿಕಂಡ್, ಹೆಂಗಾರ್ ಮಾಡಿ ಈ ರಾಜಕುಮಾರಿನ ಕೊಂದ್ ತಿನ್ನಕುತ ಗ್ಯಾನ ಮಾಡಿ, ಒಂದು ದಿನ ಕಳ್ತ್, ಎರಡ್ ದಿನ ಕಳ್ತ್, ಮೂರು ದಿನ ಕಳ್ತ್, ನಾಕನೆ ದಿನ ತಾಟ್‌ಕೆತ್ತ್ಹೇಳುವ ರಾಕ್ಷಸಿ ಅಜ್ಜಿ ಮನೆ ಮುಂದೆ ಬಂದ್ ಮುತ್ತು ತಂದೊಳೆ ತಂಗೆ ಬಾಗ್‌ಲ್ ತೇಗಿಯಪ್ಪತ ರಾಜಕುಮಾರಿನ ಕರ್‌ತ್. ಆಗ ಅಲ್ಲೆ ಇದ್ದ ಬಾಳೆಗಿಡ ಏನ್ಮಾಡ್‌ತ್ ಗೊತ್ತಾ, ಮುತ್ತು ತಾತ್‌ಲೇ ತಂಗೆ ಅಣ್ಣ ಬಾತ್‌ಲೆ ಬಾಗ್‌ಲ್ ತೆಗೆಬಡತ ಹೇಳ್‌ತ್. ರಾಕ್ಷಸಿ ಅಜ್ಜಿಗೆ ಸಿಟ್ಟ್ ಬಂದ್ ಬಾಳೆಗಿಡನ ಕಡ್‌ದ್ ಹಾಕಿತ್. ಬಾಳೆ ಗಿಡ ಸತ್ತ್‌ಹೋತ್. ಪುನಃ ಹವಳ ತಂದೊಳೆ ತಂಗೆ ಬಾಗ್‌ಲ್ ತೆಗಿತ ರಾಕ್ಷಸಿ

ಹೇಳ್ತ್. ಆಗ ಅಲ್ಲೆ ಇದ್ದ ತೆಂಗಿನ ಮರ ಹವಳ ತಾತ್‌ಲೇ ತಂಗೆ ಅಣ್ಣಾ ಬಾತ್‌ಲೇ. ನೀನ್ ಬಾಗ್‌ಲ್ ತೆಗಿ ಬಡತ ಹೇಳ್ತ್. ರಾಕ್ಷಸಿ ಅಜ್ಜಿಗೆ ಸಿಟ್ಟ್‌ಬಂದ್ ತೆಂಗಿನ ಮರನು ಕತ್ತಿಲ್ ಕಡ್‌ದ್ ಕೊಂದ್ ಹಾಕಿತ್. ಪುನಃ ಚಿನ್ನ ತಂದೊಳೆ, ತಂಗೆ ಬಾಗ್‌ಲ್ ತೆಗಿತ್ತ್ಹುಳ್ತ್. ಅಲ್ಲೆ ಹಾರಾಡಿಕಂಡಿದ್ದ ಗಿಣಿ ಬಂದ್ ಅಣ್ಣ ಬಾತ್‌ಲೇ ಚಿನ್ನ ತಾತ್‌ಲೆ ತಂಗೆ ಬಾಗ್‌ಲ್ ತೆಗಿಬಡತ ಹೇಳ್ತ್. ರಾಕ್ಷಸಿ ಅಜ್ಜಿಗೆ ಸಿಟ್ ಬಂದ್ ಗಿಣಿನ ಕೊಂದನೆತ ಹಿಡಿಯಕೆ ಹೋಕನ, ಮರಗಳ್ನ ಕಡ್ದ್ ಕೊಂದಂಗೆ ನನ್ನನ ಕೊಲ್ಲಿಕೆ ಬಂದಿಯಾ ನನ್ನ ಪುಕ್ಕನ ಹಿಡ್‌ಕಂತ್ತ್ಹೀಳಿ ಗಿಣಿಹಾರಿ ಹೋತು. ಹಿಂಗೆ ಕೋಗಿಲೆನು ಹಾರಿಹೋತು.

ಈ ರಾಕ್ಷಸಿ ಅಜ್ಜಿ ಯಾವ ಉಪಾಯ ಮಾಡ್‌ರು ಈ ರಾಜಕುಮಾರಿನ ನಂಗೆ ಕೊಲ್ಲಿಕೆ ಆತ್ಲೆಲ, ನಂಗೆ ತಿಂಬಕೆ ಸಿಕ್ಕಿತ್ಲೆತ ಹೇಳಿ ಒಂದು ಶಪತ ಮಾಡ್‌ದೆ. ನನ್ನ ಈ ಎರ್‌ಡ್ ಕೋರೆ ಹಲ್ಲ್‌ಗಳಿಗೆ ತಿಂಬಕಂತು ಸಿಕ್‌ತ್ಲೆ. ನಿನ್ನ ಅಣ್ಣಂದ್ರ್ ಬಂದ್ ನಿನ್ನ ಕರ್‌ದ್ ನೀನ್ ಬಾಗ್‌ಲ್ ತೆಗ್‌ದ್ ವಳಗೆಂದ ಹೊರಗೆ ಬಂದ್ ಕಾಲ್ ಹಾಕ್‌ಕನ ನನ್ನ ಈ ಎರ್‌ಡ್ ಹಲ್‌ಗಳ್ನ ಮೆಟ್ಟಿ ನೀನ್ ಸತ್ತ್ ಹೋಕುಂತ್ತ್ಹೀಳಿ ರಾಕ್ಷಸಿನ ಎರ್‌ಡ್ ಕೋರೆ ಹಲ್ಲ್‌ಗಳ್ನ ಕಿತ್ತ್ ಮನೆ ಮುಂದೆ ಮೆಟ್ಲ್‌ಲಿ ಊರಿ ಹೋದೆ.

ಆರ್ ದಿಕ್ಕ್‌ನ ಕಡೆಗೆ ಹೋದಂತ ಆರ್ ಜನ ಅಣ್ಣಂದ್ರ್ ಮನೆ ಕಡೆಗೆ ಬಂದೊ. ಆರ್ ಜನ್‌ರು ಒಟ್ಟಿಗೆ ಕರ್‌ದೊ. ಮುತ್ತು, ಹವಳ, ಚಿನ್ನ, ವಜ್ರ, ವೈಡೂರ್ಯ, ಬೆಳ್ಳಿ ತಂದೊಳೊ ತಂಗೆ ಬಾಗ್‌ಲ್ ತೆಗಿತ–ತಂಗೆ ಅಣ್ಣಂದ್ರ್ ಬಂದ ಕುಷಿಲಿ ಓಡಿ ಬಂದ್ ಬಾಗ್‌ಲ್ ತೆಗ್‌ದ್ ಮೆಟ್ಟ್‌ಲ್‌ಗೆ ಹೆಜ್ಜೆ ಹಾಕ್‌ಕನ ಕಾಲಿಗೆ ರಾಕ್ಷಸಿ ಅಜ್ಜಿನ ಕೋರೆ ಹಲ್ಲ್ ಚುಚ್ಚಿ, ವಿಷ ಏರಿ ಅವುಳ್ ಅಲ್ಲೇ ಬಿದ್ದ್ ಸತ್ತ್‌ಹೋದೆ.

ಆರ್ ಜನ ಅಣ್ಣಂದ್ರ್ ಮುದ್ದ್‌ನ ತಂಗೇನ ನೋಡಿ ಬಾರಿ ಬ್ಯಾಜರ ಆದೆ. ನಾವು ಅವಳ್ನ ಸಿಂಗಾರ ಮಾಡಿಕ್ಕಾಗಿ ಅಷ್ಟೆಲ್ಲ ಕಷ್ಟಪಟ್ಟ್ ಆರ್ ಜನ ಆರ್ ದಿಕ್ಕಿಗೆ ಹೋಗಿ ಮುತ್ತು ಹವಳ, ವಜ್ರ, ವೈಡೂರ್ಯ, ಚಿನ್ನ, ಬೆಳ್ಳಿನ್ನೆಲ್ಲ ತಂದೊಳಲ್ಲ ಇದ್ ಅವುಳಿಗೆ ಇದ್ದ್‌ಕಣ್ಲೆತ ಅವಳ ತಡಿನ ಮೀಸಿ ಅಣ್ಣಂದ್ರ್ ತಂದಂತಹ ವಡ್‌ವೆನ್ನೆಲ್ಲ ಅವ್‌ಳಿಗೆ ತೊಡ್ಸಿ ಅವಳಷ್ಟೇ ಉದ್ದದ ಒಂದು ಪೆಟ್ಟಿಗೆ ಮಾಡ್‌ಸಿ ಅದರೊಳಗೆ ಅವಳ್ನ ಮಲ್‌ಗ್‌ಸಿ ಹೊಳೆ ಕರೆಗೆ ತಂದ್ ಪೆಟ್ಟಿಗೆನ ನೀರ್‌ಲಿ ತೇಲಿ ಬುಟ್ಟೊ.

ಆ ಪೆಟ್ಟಿಗೆ ನೀರ್‌ಲಿ ಮ್ಯಾಲೆ ಕೆಳ್‌ಗೆ ತೇಲಿಕಂಡ್ ಅಣ್ಣಂದ್ರ ಕಣ್ಣಿಗೆ ಕಾಣದಷ್ಟ್

ದೂರಕ್ಕೆ ಹೋತು, ಸುಮಾರ್ ಒಂದು ನೂರು ಗಾವುದ ದೂರ ಹೋಕನ ಅಲ್ಲಿ ಒಬ್ಬ ಅಪ್ಪ ಇಲ್ಲದ ತಬ್ಬುಲಿ ಹೈದ ದನಗಳ್ನ ಮೇಸಿಕಂಡ್ ಹೊಳೆ ಹತ್ರಕ್ಕೆ ಬಂದದೆ. ಆ ಹೈದ ಹೊಳೆ ಕಡೆ ನೋಡ್‌ಕನ ಒಂದು ಪೆಟ್ಟಿಗೆ ತೇಲಿಕಂಡ್ ಬಂದ್‌ಟ್ಟು. ಇಂವ ಹತ್ರಕ್ಕೆ ಹೋತು, ಸುತ್ತ-ಮುತ್ತ ನೋಡ್‌ತ್ ಯಾರು ಇಲ್ಲೆ. ಮೆಲ್ಲೆ ಕೈಲಿ ಆ ಪೆಟ್ಟಿಗೆನ ಹಿಡ್‌ಕಂಡ್, ಕರೆಗೆ ತಂದ್ ಮೆಲ್ಲೆ ಪೆಟ್ಟಿಗೆನ ಮುಚ್ಚಳನ ತೆಗ್‌ತ್, ವಳಗೆ ನೋಡ್‌ದೆ ಬಾರಿ ಲಾಯಿಕಾದ ಬಂದು ರಾಜಕುಮಾರಿ ಗೂಡೆ!! ಅವಳ್ನ ಮುಚ್ಚುವಷ್ಟ್ ವಡ್‌ವೆಗಳ್ನ ಹಾಕೊಳೊ. ನೋಡ್‌ರೆ ಇದ್ ಸತ್ತ್ ಹೋಗುಟ್ಟು. ಏನ್ಮಾಡ್ದುತ ತಲೆಂದ ಕಾಲ್‌ಗಂಟ ಪರೀಕ್ಷೆ ಮಾಡ್‌ತ್. ಕಾಲ್ ಅಂಗಾಲ್ ಅಡಿಲಿ ಎರ್ಡ್ ಹಲ್ಲ್ ಮುಳ್ಳುನಂಗೆ ಚುಚ್ಚಿಕಂಡುಟ್ಟು. ಅಂವ ಮೆಲ್ಲೆ ಆ ಎರ್‌ಡ್ ಮುಳ್ಳು ಹಲ್ಲ್‌ಗಳ್ನ ಕಿತ್ತ್ ತೆಗ್‌ತ್.

ಆಗ ಆ ಚೆಲುವೆ ರಾಜಕುಮಾರಿ ಉಷ್ ಅಪ್ಪತ ಎದ್ದ್ ಕುದ್ದತ್. ಅವಂಗೆ ಅವಳ ನೋಡಿ ಬಾರಿ ಕುಷಿ ಆತ್. ಅವನ ಅವ್ವ ಅಪ್ಪಂಗೆ ಮನಸ್‌ಲೆ ವಂದಿಸಿತ್. ರಾಜಕುಮಾರಿ ಅವನ ನೀನ್ ಯಾರ್? ನಿನ್ನ ಅವ್ವ-ಅಪ್ಪ ಎಲ್ಲಿ? ನೀನ್ ಇಲ್ಲಿಗೆ ಯಾಕೆ ಬಂದದ್‌ತ ಎಲ್ಲಾ ಪ್ರಶ್ನೆ ಮಾಡ್‌ತ್. ಆಗ ಅಂವ ನಂಗೆ ಅವ್ವ-ಅಪ್ಪ ಯಾರು ಇಲ್ಲೆ ನಾನ್ ತಬ್ಬುಲಿ ಈ ಊರ್‌ನ ರಾಜನ ಮನೇಲಿ ದನ ಕಾಯುವ ಕೆಲಸ ಮಾಡಿಕಂಡ್ ನನ್ನ ಹೊಟ್ಟೆ ತುಂಬ್‌ಸಿಕಂಡ್, ಮೈಗೆ ಹರ್‌ಕ್ ಬಟ್ಟೆ ಹಾಕಂಡ್ ಕಾಲಕಳಿತ ವಳೇತ ಹೇಳ್‌ತ್. ಅಂವ ತಿರ್‌ಗಿ ಆ ಚೆಲುವೆ ರಾಜಕುಮಾರಿನ ಕೇಳ್‌ದೆ ನೀನ್ ಯಾರ್? ನಿನ್ನ ಅವ್ವ-ಅಪ್ಪ ಎಲ್ಲಿ? ನಿನ್ನ ಊರ್ ಯಾವುದ್‌ತ?

ಆಗ ಅವುಳ್ ನಂಗೂ ಅವ್ವ ಅಪ್ಪ ಇಲ್ಲೆ ನಂಗೆ ಆರ್ ಜನ ಅಣ್ಣಂದ್ರ್‌ಗ ವಳೊ. ನಾನ್ ವಯಸ್ಸಿಗೆ ಬಂದೊಳೆ. ನನ್ನನ ಬೇರೆ ಊರ್‌ನ ರಾಜಕುಮಾರಂಗೆ ಮದುವೆ ಮಾಡಿಕೆ ನಂಗೆ ಬೇಕಾದ ವಡವೆ-ವಸ್ತುಗಳ್ನ ಕೊಟ್ಟ್, ಎಲ್ಲಾ ದೇಶದ ರಾಜಕುಮಾರಗಳಿಗೆ ಕರೆಕೊಟ್ಟ್ ಸ್ವಯಂವರ ಏರ್ಪಡಿಸಿ ಮದುವೆ ಮಾಡಿ ಅರ್ಧ ರಾಜ್ಯನ ನಂಗೆ ಕೊಡೋಕುತ ನನ್ನ ಅಣ್ಣಂದ್ರ್ ಆಸೆ ಪಟ್ಟಿದ್ದೊ, ಆದರೆ ತಾಟ್‌ಕೆಂತ್ತ್ಹೇಳುವ ರಾಕ್ಷಸಿದ್ ನಡ್ದ ಕತೆನ್ನೆಲ್ಲ ಹೇಳ್‌ತ್. ಅವಳ ಮಾತ್ ಕೇಳಿ ಅವಂಗೆ ಬಾರಿ ಅಚ್ಚರಿ ಆತ್. ಬೇಜಾರ್‌ನೂ ಆತ್. ಸರಿ ಬಾ ನಿನ್ನನ ಕರ್‌ಕಂಡ್ಹೋಗಿ ನಿನ್ನ ಅಣ್ಣಂದ್ರ ಹತ್ರ ಬುಟ್ನೇತ ಹೇಳಿ ಅವಳ್ನ ಕರ್ ಕಂಡ್ಹೋತ್.

ಅವಳ ಅರಮನೆ ನೋಡ್‌ಕನ ಮನೆ ಮೆಟ್ಲ್ ಹತ್ತಿಕ್ಕೊ ಅಂವ ಲಾಯಿಕ್ಕಿಲ್ಲೆ. ಅವುಳ್ ಮನೆಗೆ ಹೋಗಿ ಅಣ್ಣಂದರ್ನ ಕರ್‌ದದೆ. ಅವುಕ್ಕೆಲ್ಲ ಇವಳ್ನ ನಂಬಿಕೆ

ಆತ್‌ಲೆ. ತಂಗೆ ನಿಜ ರೂಪನ? ಅಲ್ಲ ದೆವ್ವನತ ಗ್ಯಾನ ಮಾಡ್‌ದೋ. ಆಗ ಅವ್‌ಳು, ನಾನ್ ನಿಜರೂಪ ಅಣ್ಣಂದ್ರೆ ಸಾಯಕೆ ಕಾರಣ ಏನ್? ಆ ತಾಟ್‌ಕಿ ಹೇಳ್‌ವ ರಾಕ್ಷಸಿ ಅಜ್ಜಿ ಮಾಡ್‌ದ ಕತೆ ಏನ್‌ತ ಎಲ್ಲಾ ವಿವರಾಗಿ ಹೇಳ್‌ದೆ. ಆಗ ಆರ್ ಜನ ಅಣ್ಣಂದರ್‌ಗೆ ಮುದ್ದ್‌ನ ತಂಗೇನ ಕುಷಿನ ಹೇಳಿಕಾದುಲೆ.

ಆಗ ಆರ್ ಅಣ್ಣಂದರ್ ಅವನ ವಳಗೆ ಕರ್‌ದ್ ಅವಂಗೆ ರಾಜ ಮರ್ಯಾದೆ ಮಾಡಿ, ನಮ್ಮ ತಂಗೇನ ಸ್ವಯಂವರಲಿ ತಂಗೇನ ಗೆದ್ದ ಗಂಡ ನೀನೇತ್ತ್‌ೞೀಳಿ, ತಂಗೇನ ಅವಂಗೆ ಧಾರೆ ಎರ್‌ದ್ ಅರ್ಧ ರಾಜ್ಯನೇ ಅವಂಗೆ ಉಡುಗೊರೆ ಆಗಿ ಕೊಟ್ಟ್ ಅರಮನೇಲಿ ಇರ್‌ಸಿಕಂಡೊ. ಅವು ದಂಪತಿಗಳಾಗಿ ಮಕ್ಕ, ಮರಿಮಕ್ಕಾಗಿ ಸಾವುರಾರ್ ವರ್ಷಂದ ಬದ್‌ಕಿ ಬಾಳಿಕಂಡೊಳೊ.

✍ ಕಡ್ಯದ ಪಾರ್ವತಿ ಕೃಷ್ಣಪ್ಪ

## ಹಿರಿಯರ್‌ನ ಮಾತಾಡ್ಸೊಕು.....

ಯಾವ್ದೇ ಬಾಸೆ ಪ್ರತೀ ಹತ್ತ್ ಕಿ.ಮೀ ಗೆ ಹಂಞ ಬದಲಾದೆ. ಬದಲಾಗುವ ಪದಗಳ ಬದಲಾವಣೆ ಮಾಡದೆ ಜನ ಬಳಸ್ತಾ ಇರುದರ ಕಾಂಬಕ್. ಹಂಗೆ ಬಳ್ಸುದು ತಪ್ಪಲ್ಲ. ಬಾಸೆಲಿ ಮಡಿವಂತಿಕೆನ ಮಾಡ್ತಾ ಹೋದರೆ ಬಾಸೆ ಬೆಳೆದುಲೆ. ಹೊಸ ಪದಗ ಸೇರ್ತಾ ಹೋದಷ್ಟ್ ಬಾಸೆ ಬೆಳಿತಾ ಹೋದೆ. ಅದರ್ನ ಬಾಸೆ ಸಂಪತ್‌ತ್ತೇಳಕ್. ಹಂಗೆತ್ತೇಳೆ ಮೂಲ ಪದಗಳ ಬುಡೊಕುತ ಅಲ್ಲ. ಹಿರಿಯವು ತಮ್ಮ ಮಕ್ಕಳೊಟ್ಟಿಗೆ ಅವ್ವ ಬಾಸೆನ ಮಾತಾಡೊಕು. ಸಾಧ್ಯವಾದಷ್ಟ್ ಮೂಲ ಪದಗಳ ಸೇರ್ಸಿಕಂಡ್ ಮಾತಾಡೊಕು.

ಎಂಬತ್ತ್ ತೊಂಬತ್ತ್ ವಯಸ್ಸ್ ದಾಟಿದವರೊಟ್ಟಿಗೆ ಮಾತಾಡಿರೆ ಅವರ್‌ಂದ ಅಚ್ಚ ಅವ್ವ ಬಾಸೆನ ಪದಗ ಸಿಕ್ಕಿವೆ.

–ಸಂ.

# ಕಡೆಗೂ ಹೊಟ್ಟೆ ಸಮಾ ಆತ್

"ತೂ, ತೂ, ತೂ – ಎಂತಾ ನಾತ? ಎಂತಾ ನಾತ? ಮೂಂಕು ಬುಡಿಕೇ ಆದುಲ್ಲೆ. ನೋಡು, ತಿಣೆಗೇ ಕಂಟ್ ಕಂಟ್ ನಾತ ಬಂದದೆ. ಯಾರ್ ಹೂಂಸಿದ್? ನೀವೇನ್ ಕಾಂಪ್ರಿ ತಿಂದಳರಿಯೋ?" – ಶಾರದಕ್ಕ ಸೆರ್‌ಂಗ್‌ನ ಕೊಡಿಲಿ, ಬಲ್ದ ಕೈಲಿ ಮೂಂಕ್ ಮುಚ್ಚಿಕಂಡ್, ಎಡ್ದ ಕೈಲಿ ಮಾಯ್ಪುನ ಸೂಡಿನ ಹಿಡ್ಕಂಡ್, ವೊಯ್ಯಪ್ಪುರೆಲಿ ಆಟ ಆಡ್ತಿದ್ದ ಮಕ್ಕಳ ಹಕ್ಕಲೆ ಬಂದ್ ಪರ್‌ಂಚಿಕೆ ಸುರು ಮಾಡ್ದೊ. ಅಪೇಕ್ಷಾ, ನಿರೀಕ್ಷಾ "ನಾವಲ್ಲ, ನಾವಲ್ಲ ಅದ್ ಆದಿತ್ಯ –" ಎಂತ ಹೇಳಿ ತಮ್ಮನ ಕಡೆಗೆ ಕೈ ತೋರ್ಸಿದೊ.

"ಹೊರಗೆ ಹೋಗಿ, ಅಂಗ್ಡಿ ತಿನ್ಸ್, ಹಾಳು ಮೂಳು ತಿಂದ್‌ದ್ ಬಾದು. ಅದ್ ಹೊಟ್ಟೆಗೆ ಹಿಡ್ಯೋಕಲೆ? ನಿಮ್ಮ ದೊಂಡೆಗೆ ಮನೆಲಿ ಬೇಸಿದ್ ಆದುಲ್ಲೆ. ಹೊರಗೆನ ತಿನ್ಸ್‌ನೇ ನೀವುಗೆ ಕುಸಿ." ಶಾರದಕ್ಕ ಪರ್‌ಂಚುದರ ಮುಂದರ್ಸಿದೊ.

ಸೊಸೆನ ಮಾತ್‌ನ ಕೇಳ್ಸಿಕಂಡ ಅತ್ತೆ ಸುಬ್ಬಮ್ಮಜ್ಜಿ,

"ಮಕ್ಕಳಿಗೆ ಏಕೆ ಬೊಯ್ದಿಯ? ಅವ್ಕೆ ಮೂರು ತಿಂಗಳಿಗೊಮ್ಮೆ ಆದರ್ ಜಾಡ್ನೆಗೆ ಮೊದ್ದ್ ಕೊಡಿಕೆ ನಿಂಗೆ ಆದ್ಲೆನೋ? ಹೊಟ್ಟೆಲಿದ್ದ ಕಲ್ಮಸ ಎಲ್ಲಾ ಒಮ್ಮೆ ಹೊರಗೆ ಹೋದರೆ ಹೂಂಸುದು ಗೀಂಸುದು ಎಲ್ಲಾ ನಿಲ್ಲುದು. ಮಕ್ಕಳಿಗೂ ಸುಕ."–ಎಂತ ಸೊಸೆಗೆ ಗದ್ರಿಸಿದೊ.

ಅತ್ತೆ ಹೇಳ್ದ ಮಾತ್ ಶಾರದಕ್ಕಂಗೆ ನಾಟಿತ್. ಸುಳ್ಯ ಜಾತ್ರೆಗೆ ಮುಟ್ಟ ಮೂರ್ತಿಂಗಳ್‌ಗೆ ಒಮ್ಮೆ ಮಕ್ಕಳಿಗೆ ಅವು ಜಾಡ್ನೆಗೆ ಮೊದ್ದ್ ಕೊಡ್ತಿದ್ದೊ. ಅದರ್‌ಂದ ಮೇಲೆ ತವುರು ಮನೆಲಿ ತಮ್ಮನ ಮೊದ್ವೇಂತ ನೆಂಟ್ರ್ ಬಾದು, ಈಳ್ಯ ಸಾಸ್ತ್ರ, ಮೊದ್ವೇಂತ ಮೂರ್‍ನಾಕ್ ತಿಂಗ ಕಳ್ದದೇ ಗೊತ್ತಾತ್ಲೆ. ಮನೆನ ಹಿರ್‍ಯ ಮಗ, ಅವ್ವಂಗೆ ಹೆಗ್ಲ್ ಕೊಟ್ಟತ್ಲರೆ ಹೇಂಗೆ? ಹೀಂಗೆ ಈ ಬರಾಟೆಲಿ ಮಕ್ಕಳ ಬಗ್ಗೆ ಏಚನೆನೇ ಮರ್‍ತೋತ್. ಈಗ ತಿಂದದೆಲ್ಲಾ ಹೊಟ್ಟೆಲಿ ಗಿಡ್ಪಿ ನಿತ್ತುಟ್ಟು. ನಾಳೆನೇ ಸೂರಯ್ಯಣ್ಣನ ಅಂಗ್ಡಿಂದ ಬಾಲಗ್ರಹ ಗುಳ್ಗೆ ತಂದ್ ಗರ್ಗದ ರಸಲಿ ಹಸಿ ಹೊಟ್ಟೆಗೆ ಅರ್ದ ಕೊಂಡೆ ಮೊದ್ದ್‌ನ ಕುಡ್ಸೋಕು." ಎಂತ ಮೊನ್ಸ್‌ಲೇ ಗ್ರೇಸಿಕಂಡ್, ಬೇಗ ಬೇಗ ನೊಯ್ಯಪ್ಪುರೆಂದಳೇ ಗುಡ್ಸಿಕೆ ಸುರುಮಾಡ್ದೊ.

ಮಕ್ಕ ಅವ್ವನ ಪರ್‌ಂಚಟ ಕೇಳಿ ಹೆದ್ರಿ ಇಜ್ಜೆಲ್‌ಗೆ ಇಳ್ದ್, ಹಟ್ಟಿ ಹಕ್ಕಲೆ ಓಡಿಹೋದೊ. ಶಾರದಕ್ಕ ಬೊಳ್ಪುನ ಒಮ್ಮೆನ ಕೆಲ್ಸನ ಒತ್ತರೆ ಮಾಡಿ ಗರ್ಗದ ಸೊಪ್ಪು ತಾಕೆ ಬೈಲ್‌ಗೆ ಹೋದೊ. ತೋಟಲಿ ಎಸ್ಟ್ ಹುಡ್ಕಿರೂ ಗರ್ಗದ

ಸೊಪ್ಪು ಸಿಕ್ಕಿತ್ತೆ. ಗದ್ದೆ ಪುಣಿಲಿ ಆದರೆ ಮುಂದೆ ಎಲ್ಲಾ ಬೇಕಾದಾಂಗೆ ಸಿಕ್ತಿತ್ತ್. ಈಗ ಗದ್ದೆಗ ಎಲ್ಯೊಳೊ? ಅಂತು ಇಂತು ಅಕೆರಿಗೆ ತೋಟದ ಉಜಿರ್‌ಕಣಿ ಪಕ್ಕಲಿ ಚಿಗ್ತ್‌ಕಂಡಿದ್ದ ಗರ್ಗದ ಸೊಪ್ಪು ಕಂಡತ್. ಗರ್ಗದಾಂಗೆ ಕಾಂಬ ಕಾಟ್ ಸೊಪ್ಪುನೂ ಒಂದುಟ್ಟು. ಇದ್ ಗರ್ಗನೋ? ಕಾಟೋ? ಒಮ್ಮೆ ಬೊಗ್ಗಿ ನೋಡ್ದೊ. ಗರ್ಗಲಿ ಎರ್ಡ್ ಬಗೆ ಇದ್ದದೆ. ಒಂದು ಕೆಂಪು ದಂಟ್‌ದ್. ಇನ್ನೊಂದ್ ಬೆಳ್ದ್ ದಂಟ್‌ದ್. ಅದರ ಬೆಳ್ಳಂಗೆನ ಹೂವು ಕೆಬಿಗೆ ಇಸುವ ಬುಗುಡಿನ ಹಾಂಗೆ ಇದ್ದದೆ. ಹೂ, ಮುಗುರು ಇದ್ದ ಗರ್ಗನ ಕೊಡಿನ ನೋಡಿ, ಒಂದ್ ಕೊಡಿನ ಕಿಣ್ಕಿ, ಬಾಯಿಗೆ ಹಾಕಿ ಅಗ್ದ್ ನೋಡ್ದೊ. "ಹೌದು. ಕಣೆರ್, ಕಣೆರ್ ಕಂಯಿ ಉಟ್ಟು. ಇದೇ ಅದ್" ಎಂತ ನೆಂದ್, ನಾಲ್ಕ್ ಪುಂಡಿ ತುಂಬಾ ದಂಟ್, ಸೊಪ್ಪುನ ಮುರ್ದ್‌ಕಂಡ್, ಚೋಡ್ ನೀರ್‌ಲಿ ತೊಳ್ದ್, ಮೊಟ್ಟೆಲಿ ಕಟ್ಟಿಕಂಡ್, ಮನೆಗೆ ತಂದೊ. ಹಿಂಬೊತ್ತ್ ಅವರ ಗಂಡ ಕೇಶವಣ್ಣ ಕೆಲ್ಸ ಎಲ್ಲಾ ಮುಗ್ಸಿ ಮಿಂದ್ ಪೇಟೆಗೆ ಹೊರ್ಡಿಕನ ಹೆಣ್ಣ್‌ನ ಕರ್ದ್,

"ಇಂದನೆ ಶಾರದ, ನಾ ಪೇಟೆಗೆ ಹೋನೆ. ಸಾಮಾನ್ ಏನಾದರ್ ಬೇಕರೆ ಈಗಳೆ ಹೇಳ್. ನಾಳೆ ಅದ್ ಇಲ್ಲೆ, ಇದ್ ಇಲ್ಲೇಂತ ಪರ್‌ಂಚ್‌ಬಡ" ಎಂತ ಕೇಳ್ದೊ.

"ಸಾಮಾನ್ ಎಲ್ಲಾ ಉಟ್ಟು. ಹಾಂಗೇನೇ ನೀವು ಬಾಕನ ಹಂಞ ಒಣ್ಗಲ್ ಮೀನ್ ಕಟ್ಟಿಕಂಡ್ ಬನ್ನಿ. ಸೂರಯ್ಯಗೌಡ್ರ ಅಂಗ್ಡಿಂದ ಒಂದು ನಾಕ್ ಬಾಲಗ್ರಹ ಗುಳ್ಗೆನನೂ ತನ್ನಿ. ಮಕ್ಕಳಿಗೆ ಜಾಡ್ಸೆಗೆ ಮೊದ್ದ್ ಕೊಡೊಕು." ಂತ ಶಾರದಕ್ಕ ಹೇಳ್ದೊ.

"ಇಂದಾ, ಬಾಲಗ್ರಹ ಗುಳ್ಗೆ ಕೊಡಿಕನ ಜಾಗ್ರತೆ ಬಲಾ. ಇಡೀ ಗುಳ್ಗೆ ಕೊಡ್ಬಡ. ದೊಡ್ಡೋವ್ಕೆ ಮುಕ್ಕಾಲ್ ಗುಳ್ಗೆ ಕೊಡು. ಸಣ್ಣಂವಂಗೆ ಅರ್ದ ಕೊಟ್ಟರೆ ಸಾಕ್" ಎಂತ ಗಂಡ ಹೇಳಿಕಾಕನ ಶಾರದಕ್ಕ,

"ನಾ ಏನ್ ಇದ್ ಸುರು ಕೊಡ್ದೋ? ಹನ್ನೆರ್ಡ್ ವೊರ್ಸಂದ ಕೊಡ್ತಾ ಒಳೆ. ಇದರೆಲ್ಲಾ ನೀವು ನಂಗೆ ಹೇಳೊಕೋ?"

"ಆತ್ ಮಾರಾಯ್ತಿ. ಪರ್‌ಂಚ್‌ಬಡ. ಮೊದ್ದ್ ಹೆಚ್ಚಾಗಿ ಮಕ್ಕ ಉರ್ಬಿ, ಉರ್ಬಿ–ಕಂಗಾಲಾಕೆ ಬೊತ್ತಲೆ? ಅದ್ಕಾಗಿ ಹೇಳ್ದೆ. ನೀ ಬಾಳ ಬಿರ್ಸೆತಿ. ನಂಗೆ ಗೊತ್ತಿಲ್ಲೆನೊ? ನಿನ್ನ ಬಿರ್ಸಾತಿಕೆ. ನಾ ನಿಂಗೆ ಬುದ್ದಿ ಹೇಳಿಕೆ ಬಂದೆಲೆ?" ಎಂತ ಹೇಳಿಕಂಡ್ ಅವು ಜಾಲ್‌ಗೆ ಇಳ್ದ್ ಬೈಕ್ ಹತ್ತಿದೊ. ಶಾರದಕ್ಕ ಗಂಡಂಗೆ ಸಿಟ್ಟ್ ಬಂದದರ ಕಂಡ್, ಒಳಗೆಂದ ಒಂದ್ ತಂಗೀಸ್ ಬೇಗ್‌ನ ತಕಂಡ್ ಓಡಿಕಂಡ್ ಬಂದ್ ಗಂಡನ ಕೈಗೆ ಕೊಟ್ಟ್,

"ನೀವುಗೆ ಮೂಂಕುನ ಕೊಡಿಲಿ ಕೋಪ. ನಾ ಏನ್ ಬೇಡದ ಮಾತ್ ಹೇಳ್ದೋನೋ?" ಂತ ಮಂಜಣೆ ಮಾಡ್ದೊ. ಕೇಶವ ಗೌಡ್ರು ಮಾತಾಡದೆ, ಹೆಣ್ಣ್‌ನ ಕೈಯ್‌ಂದ ಚೀಲ ತಕ್ಕಂಡ್, ಬೈಕ್ ಬುಟ್ಟ್‌ಕಂಡ್ ಹೋದೊ.

ಮಾರ್ನೆ ದಿನ ಐತಾರ. ಮಕ್ಕಳ್‌ಗೆ ಸಾಲೆಗೆ ರಜೆ. ಬೊಳ್ಪುಗೆನೇ ಗರ್ಗದ ಕೊಡಿನ ಕಡ್ಕಲ್‌ಗೆ ಹಾಕಿ, ಹಂಞ ನೀರ್ ಸೇರ್ಸಿ, ಮರದ ಕೊದಂಟಿಲಿ ಗುದ್ದಿ ಗುದ್ದಿ ದಪ್ಪ ರಸನ ಒಂದ್ ಕೊಂಡೆನಸ್ಟ್ ತೆಗ್ದೊ. ಅದರ ಮೂರು ಸಣ್ಣ ಸಣ್ಣ ಗ್ಲಾಸ್‌ಗೆ ಪಾಲ್ ಮಾಡಿ ಹಾಕಿದೊ. ಒಂದು ಗ್ಲಾಸ್‌ಗೆ ಅರ್ಧ ಗುಳ್ಗೆನ ಹೊಡಿ ಮಾಡಿ ಕರ್‌ಂಡ್‌ಸಿ ಇಸಿದೊ. ಒಳ್ದ ಎರ್ಡ್ ಗ್ಲಾಸ್‌ಗೆ ಮುಕ್ಕಾಲ್, ಮುಕ್ಕಾಲ್ ಗುಳ್ಗೆನ ಹೊಡಿಮಾಡಿ ಕರ್‌ಂಡ್‌ಸಿ ಇಸಿದೊ. ಮಕ್ಕಳ ಎದ್ರಿಸಿ, ಮೂರು ಜನಕ್ಕೂ ಸಣ್ಣಂವಂಗೆ ಅರ್ಧ ಗುಳ್ಗೆ ಹಾಕಿದ ರಸ, ದೊಡ್ಡೋವ್ಕೆ ಇಬ್ರೊರಿಗೆ ಮುಕ್ಕಾಲ್ ಗುಳ್ಗೆನ ಹಾಕಿದ ರಸನ ಮೂಂಕ್ ಹಿಡ್ದ್ ಕುಡ್ಸಿದೊ. ಸಣ್ಣಂವ ಹಟ ಮಾಡ್ತ್. ಅವು ಬುಟ್ಟವೆನೋ?

"ನೋಡು ಆದಿತ್ಯ, ನೀ ಹಟ ಮಾಡ್ರೆ, ಕಾಲ್‌ಲಿ ಮೊಲ್ಗಿಸಿ, ಬಾಯಿಗೆ ಸೆಡೆಕಣೆ ಹಾಕಿ, ಮೂಂಕ್ ಹಿಡ್ದ್ ಕುಡ್ಸಿನೆ. ಕುಡ್ಯದೆ ಎಲ್ಲಿಗೆ ಹೋದ್ಯ?"ಂತ ಜೋರ್ ಮಾಡ್ದೊ. ಅವ್ವ ಹೇಳ್ದಾಂಗೆ ಮಾಡೋವೇಂತ ಮಂಜಂಗೆ ಗೊತ್ತುಟು. ಅಂವ ಉಪಾಯ ಇಲ್ಲದೆ ಮೋರೆ ಹುಳ್ಳಂಗೆ ಮಾಡಿಕಂಡ್ ಕುಡ್ತ್.

"ಅಬ್ಬಾ, ನಾ ಗೆದ್ದೆ. ಇನ್ನ್ ಇವು ಕಂಟ್, ಕಂಟ್ ಹೂಂಸುದು ನಿಲ್ಸುವೊ. ಮೂರು ತಿಂಗಳ್‌ಗೊಮ್ಮೆ ಮೊದ್ದ್ ಕೊಡ್ದರ ಇನ್ನ್ ತೊಪ್ಪುಸಿಕೆ ಆಗದ್" ಎಂತ ಮೊನ್ಸ್‌ಲಿ ನೆಂದ್‌ಕೊಂಡೊ.

ಅರ್ಧ ಗಂಟೆ ಕಳ್ದ ಮೇಲೆ ಒಂದೊಂದು ದೊಡ್ಡ ಗಲಾಸ್ ಬಿಸ್ಲೀರ್ ಕುಡ್ಸಿದೊ. ತಕಾ! ಒಬ್ಬೊಬ್ಬನೇ ಪಾಯಿಕಾನೆಗೆ ಓಡಿಕೆ ಸುರು ಮಾಡ್ದೊ. ಹೊಟ್ಟೆಲಿದ್ದ ಕಪ, ನೋಳಿ, ಎಲ್ಲಾ ಬಸ ಬಸಾಂತ ಹೊರಗೆ ಹೊರ್ಟತ್. ಆಗಾಗ ಬಿಸ್ಲೀರ್‌ನ ಕುಡ್ಯಕೆ ಕೊಟ್ಟೊ. ಸುಮಾರ್ ಹನ್ನೊಂದ್ ಗಂಟೆ ಆಕನ ಐದಾರ್ ಸಲ ಹೊರಗೆ ಹೋಗಿ ಹೊಟ್ಟೆ ಕಾಲಿ ಆಕಂಡ್ ಬಾತ್. ಮಕ್ಕಳಿಗೆ ಹೊರಗೆ ಹೋಗಿ ಹೋಗಿ ಬಿಸ್ಲ್‌ಗೆ ಬಾಡ್ದ ಬಸಳೆ ಹಾಂಗೆ ಆದೊ. ಆ ಮೇಲೆ ಶಾರದಕ್ಕ ಕ್ರೊಸ್ಲಕ್ಕಿ ಗಂಜಿಗೆ ಮೊಜ್ಜಿಗೆ ಹೊಯ್ದ್, ಉಂಬಕೆ ಕೊಟ್ಟೊ. ಅದ್ ಕುಡ್ದ ಮೇಲೆ ಮಕ್ಕಳ್‌ಗೆ ಜೂವ ಬಂದಾಂಗಾತ್. ಕಡೆಗೂ ಹೊಟ್ಟೆ ಸಮಾ ಆತ್.

✍ ಎಂ.ಜಿ. ಕಾವೇರಮ್ಮ

# 'ದೇವ್ರ ಶಾಪ!'

ದೇವಲೋಕದಲ್ಲೇ ಇದ್ದ್ ಬೋರ್ ಆಗಿ ಒಂದು ದಿನ ಭೂಮಿಗೆ ದೇವರು ಪ್ರವಾಸ ಬಂದಿದ್ದೊಗಡ. ಭೂಮಿಲಿ ದೇವರು ನಡ್ದ್ ನಡ್ದ್ ಸುಸ್ತಾಗಿ ತುಂಬಾ ಬಾಯಾರಿಕೆ ಆತ್. ಆಗ ರಸ್ತೆ ಬದೀಲಿ ವ್ಯಕ್ತಿಯೊಬ್ಬ ಹಾಲ್ ಮಾರ್ತಾ ಇದ್ದದನ್ನ ದೇವ್ರು ನೋಡ್ದೊ. ಆ ಹಾಲ್ ಮಾರ್ತಾ ಇದ್ದವನ ಹತ್ರ ದೇವ್ರು ಹೋಗಿ ನಂಗೆ ತುಂಬಾ ಬಾಯಾರಿಕೆ ಆದೆ. ನಂಗೆ ಕುಡಿಯಕೆ ಹಾಲ್ ಕೊಟ್ಟಿಯಾಂತ ದೇವ್ರು ಕೇಳುವೆ. ಆಗ ಹಾಲು ಮಾರಂವ ನಿನ್ನ ಹತ್ರ ದುಡ್ಡು ಉಟ್ಟಂತ ಕೇಳ್ತ್. ಆಗ ದೇವ್ರು ಇಲ್ಲೆ ಅಂತ ಹೇಳ್ದೊ. ದುಡ್ಡು ಕೊಟ್ರೆ ಮಾತ್ರ ಹಾಲ್ ಕೊಡ್ದುಂತ ದೇವರ ಬೇಡಿಕೆನ ಹಾಲ್ ಮಾರಂವ ನಿರಾಕರಿಸಿದೆ.

ದೇವ್ರು ಬೇಜಾರಂದ ಮುಂದೆ ಹೋದೆ. ಆಗ ದಾರಿಲಿ ಒಬ್ಬ ಶ್ರೀಮಂತನ ಮೊದುವೆ ದಿಬ್ಬಣದ ಮೆರವಣಿಗೆ ಹೋದು ದೇವರ ಕಣ್ಣಿಗೆ ಕಂಡದೆ. ಅದರ್ಲಿ ಎಲ್ಲರಿಗೂ ಸಾರಾಯಿ ಕೊಡ್ತಾ ಇದ್ದೊ. ಅಲ್ಲಿಗೆ ಹೋದ ದೇವ್ರು ನಂಗೆ ತುಂಬಾ ಬಾಯಾರಿಕೆ ಆದೆ. ನಂಗೂ ಕುಡಿಯಕೆ ಸಾರಾಯಿ ಕೊಟ್ಟರಿಯಾ ಅಂತ ದೇವ್ರು ಕೇಳ್ದೊ. ಆಗ ಅವು ಸಾರಾಯಿ ಕೊಡಿಕೆ ಒಪ್ಪುವೆ. ಹಾಲ್ ಮಾರವನ ನೆನಪಿಸಿಕೊಂಡ ದೇವ್ರ ಸಾರಾಯಿಗೆ ಕೊಡಿಕೆ ನನ್ನಲ್ಲಿ ದುಡ್ಡು ಇಲ್ಲೆಂತ ಹೇಳ್ದೊ. ಆಗ ಮೆರವಣಿಗೆಯಲ್ಲಿದ್ದ ಜನರ್ "ಇದ್ಕೆ ನೀವು ಹಣ ಕೊಡ್ಬೇಡಿ. ಅಲ್ಲದೆ ಎಷ್ಟು ಬೇಕೋ ಅಷ್ಟು ಕುಡಿಯನಿ. ಕುಡ್ದ್, ಕುಣ್ದ್ ಆನಂದಿಸಿ" ಅಂತ ಹೇಳ್ದೊ! ಆಗ ಖುಷಿಯಿಂದ ದೇವ್ರು ಸಾರಾಯಿ ಕುಡ್ದ್ ಬಾಯಾರಿಕೆನ ನೀಗಿಸಿಕೊಂಡೊ. ಮತ್ತೆ ಹಾಲ್ ಮಾರವನ ಹತ್ರ ಬಂದ ದೇವ್ರು "ನಿಮ್ಮ ಅಂಗಡಿಗೆ ಯಾರೂ ಬರ್ಬಾರ್ದು. ನೀವೇ ಸ್ವತಃ ಮನೆ ಮನೆಗೆ ಹೋಗಿ ಹಾಲ್ ಮಾರಿ ಬರೊಕೂ"ಂತ ಶಾಪ ಕೊಟ್ಟವೆ. ಸಾರಾಯಿ ಮಾರವಂಗೆ, "ನೀವು ಮನೆ ಮನೆಗೆ ಹೋಗಿ ಮಾರುವ ಅಗತ್ಯ ಇಲ್ಲೆ. ಗ್ರಾಹಕರೇ ನಿಮ್ಮ ಅಂಗಡಿಗೆ ಬಂದ್ ಸಾರಾಯಿ ತಗೊಂಡು ಹೋಕು"ಂತ ವರ ಕೊಟ್ಟವೆ. ದೇವ್ರು ಅಂದ್ ಕೊಟ್ಟ ಶಾಪ ಇಂದಿಗೂ ಚಾಲ್ತೀಲಿ ಉಟ್ಟು.

✍ ಅಂಬೆಕಲ್ಲು ಸುಶೀಲ ಕುಶಾಲಪ್ಪ

ಕವನ ಜೊಂಪೆ

# ಸಂತೆಲಿ ಒಬ್ಬ ಇಂತವನಿತ್ತ್



ಸಂತೆಲಿ ಒಬ್ಬ ಇಂತವನಿತ್ತ್:
ಒಂದು ಹೆಜ್ಜೆ ಮುಂದೆ ಊರಿ,
ಎರಡ್ ಹೆಜ್ಜೆ ಹಿಂದೆ ಹೋಗಿ,
ಮುಂದೆ ನೋಡಿ ನಡೀತಿತ್ತ್!

ಮೂರಕ್ಕೆ ಮೂರು ಕೂಡ್ಸಿ,
ಮೂರರ ಕಳ್ದ್ ನೋಡಿ,
ಮೂರರಿಂದ ಗುಣಿಸಿ ಅದ್ಕೆ
ಮೂರರಿಂದ ಭಾಗಿಸ್ತಿತ್ತ್!

ಲೆಕ್ಕ ಹೇಳಿ ಲೆಕ್ಕ ಮಾಡಿ,
ಅವನ ಜಾಣ್ಮೆಗವನೆ ಮೆಚ್ಚಿ,
ಎಡಕೆ ಹೋಗಿ ಬಲಕೆ ತಿರ್ಗಿ,
ಮುಂದೆ ನೋಡಿ ಹಿಂದೆ ನಡ್ದ್,
ಅವಂಗೆ ಅವ್ನೆ ಹೇಳ್‌ತಿತ್ತ್:
ಮೂರೆಂದರೆ ಬರಿ ಮೂರಲ್ಲ;
ಅದಿಯೇ ಜನನ, ಜೀವನ, ಮರಣ!

✍ ಕುತ್ಯಾಳ ನಾಗಪ್ಪ ಗೌಡ (ಕಿರಣ)

# ಅಕೇರಿಮುಟ್ಟಸ......



ಬಾನಕ್ಕಿ ಬರ್ದ ಈ ಹಾಡ್‌ಗೆ ಏನ್‌ಂತ ಹೆಸರಿಸ್‌ಲಿ?
ಬಾನ್ ತುಂಬಿ ಬಾಗಿಟು ಬಣ್ಣದ ಕನ್ಸ್‌ಲಿ...
ಬಾಳ್‌ಲಿ ಬಂದ ತಿಂಗಳ್ ಬೊಳ್ಪುನ ಲಾಯ್ಕಲಿ ಕಾಣೊಕು
ಇರ್ಲ್ ಕಳ್ದ್ ಬೊಳ್ಪು ಬರೊಕು ಕಾಲ ಚಕ್ರಲಿ...

ಹಳ್ಳದ ಹಕ್ಕಲೆ ಹರ್ದ ಮನ್ಸ್‌ಲಿ
ಭಾವ ತುಂಬಿ ಬಂದುಟು...
ಕಡಲ್‌ನ ದಾರಿನ ಹತ್ತಿ ಇಳ್ದ್
ಗೇಯ್ದ್ ಜೀವ ಮಾಗಿಟು
ಹಿಂಗೆನೆ ಆಗಿ ಕವಿತೆನ ರೂಪ ಹರಳ್‌ಗಟ್ಟಿದೆ
ಮನಸ್ ಕನಸ್ ಎರ್ಡ್
ಲಾಯ್ಕದ ರಾಗ ಹಾಕಿದೆ

ಬಣ್ಣದ ಕನ್ಸ್‌ಲಿ ಭಾವ ಯಾತ್ರೆ ಪುನಃ ಸುರಾದೆ
ಹಳ್ತ್ ಬೇರ್‌ಲಿ ಹೊಸ ಚಿಗ್‌ರ್ ಪೊರ್ಲು ಕಂಡದೆ
ಕಾಲದ ಕವಿತೆಗೆ ಹೆಜ್ಜೆ ಹೆಜ್ಜೆಗ ಮೆರುಗು ಕೊಟ್ಟದೆ
ಹೊಸ್ತ್ ದಿನಂಗಳ ಕಾಯೊದೆ ಬದ್ಕ್‌ನ ಖುಷಿ ಆಕು
ಇರ್ವ ಬಾಳ್‌ನ ಇರ್ವಂಗೆ ತಕಣಕು ಅಕೇರಿಮುಟ್ಟಸ...

✍ ಸಂಗೀತ ರವಿರಾಜ್

# ನಮ್ಮ ಇಬ್ಬರ ನೊಡುಲಿ

ನೀಲಿ ಗುಡ್ಡೆನ ನೊಡುಲಿ
ಹಸ್ರುಟ್ಟು ನಿಲ್ಲ್‌ಕನ
ಹರಿವ ಹಳ್ಳದ ಹೊಯ್ಲ್
ಹಾಡಾಗಿ ಬಾಕನ ನೋಡ್ದೆ ಸುರುಂದ
ಕೊಣ್ದೆ ನೂರು ಸರ್ತಿ ಮೈ ಮನ್ಸ್‌ನ ತುಂಬ
ಹಾರ್‌ವ ಕಾರಂಜಿನ

ಆಸೆ ಅಂಡ್ಗ್‌ಸಿದ ನೆಲ
ಬುಡ್ಸಿಟು ನನ್ನ ಎದೆನ ಎದ್ರ್
ನಾಚಿಕೆಲಿ ನಿಲ್ಲ್‌ಕನ
ಪಿಳಿ ಪಿಳಿ ಕಣ್ಣ್‌ಲಿ ನೋಡ್ದೆ
ಹೊಸ ಬೊದ್ಕು !
ಹಬ್ಬಿದ ಬೊಳ್ಳಿನ ತುಂಬ ಎಳ್ತ್ ಚಿಗ್‌ರ್
ಹಸ್ರ್ ಹೂವು
ಎಸಳ್ ಎಸಳ್ ತುಂಬ ಪ್ರೀತಿನ ಉಸ್ರು

ಈಗ ಯಾಕೆ ಸುಮ್ಮನೆ
ಎಲ್ಲಿ ಹೋತ್ ಆ ಪ್ರೀತಿ
ಮರ್ತ್ ಹೋಗುಟ ಮಾತ್ ಇಷ್ಟ್ ಬೇಗ!
ಕಳ್ದ್ ಹೋತ್ ಕನ್ಸ್ ದಿಕ್ಕ್ ತೊಪ್ಪಿ!

ಮುಗ್ಟ್ ಅರ್ಲಿದ ಹಂಗೆ
ತುಟಿ ಅರ್ಲುಸುದರ ನೋಡಿಕಿಲೆ ನಾ!
ಕನ್ಸ್‌ಲಿ ಕಳ್ದ್ ಹೋದವನ
ಹುಡ್ಕುವನಾ ನೀ!
ಬಾಯಿ ಬುಟ್ಟುಟು ನೆಲ
ಗುಡ್ಗಿದೆ ಬಾನ
ಹೊಯ್ದದೆ ಜಿರಿಗುಟ್ಟ ಮಳೆ
ಕುಡ್ದದೆ ಮೊಣ್ಣ್
ಸೇರೊಕಲಾ ನಾನ್–ನೀನ್!

✍ ಉದಯಕುಮಾರಿ ಚೆಂಬು,

# ದಂಡ್‌ಲಿರ್ವ ನಮ್ಮ ಹೈದಂಗೊಂದು ಹಾರೈಕೆ

ಜನ್ಮಭೂಮಿ, ಭರತಭೂಮಿ
ನಿನ್ನುದರ ಸಾಂಕುವ ಕರ್ಮಭೂಮಿ!
ಅವ್ವ ಕಾವೇರಿ ಹರಿವ ಪುಣ್ಯಭೂಮಿ
ಜನ್ಮ ನೀಡ್ದ ಅಪ್ಪ ಅವ್ವ ಬದ್ಕಿದ ಶ್ರೇಷ್ಠಭೂಮಿ ॥ಶ್ರೇಷ್ಠ॥

ಅಂದುಂಡ, ನಿನ್ನವ್ವನ ಎದೆಹಾಲ್‌ನ ಬಲ
ಅಲ್ಲಿ ದೂರ ಕಂದರಲಿ, ಹರಿವ ಜೀವಜಲ!
ಅಲ್ಲಿ ಆ ಕಡೆನ ತೊರೆ, ತೋಡುನ ಗಂ-ಜಲ
ಅದರ್ಲಿ ಸಿಕ್ಕೊಕು ನಿಂಗೆ ಜಂಘಾಬಲ ॥ಜಂಘಾಬಲ॥

ಹೊಯ್ಗೆ ಕಾಡ್‌ನ ಆ ಪೊಯ್ಯೆ
ಹೊದ್ದುಟ್ಟು ಭಾರತಾಂಬೆ ನಿನ್ನಯ್ಯೆ..!
ಹೊಚ್ಚ-ಹಚ್ಚ-ಹಸ್ರ್ ಸೀರೆ
ಹೊತ್ತ್ ನಿತ್ತುಟ್ಟು-ಗಿರಿ, ಶಿಖರ, ಹಿಮಗಡ್ಡೆನ ಈ ಧೀರೆ ॥ಧೀರೆ॥

ಗಡಿಲಿ ಎಳ್ದ ಬೇಲಿ ಸರ್ಪಳಿ
ಶತ್ರುನ ಫಿರಂಗಿ ಗುಂಡುನ ದಾಳಿ..!
ಧೀರ ಹೈದ ನಿಂಗಾಗ್‌ಲಿ ಅದ್ ಹೂವುನ ಗಾಳಿ,
ಅದೇ ನಿನ್ನ ಬದ್ಕ್‌ನ ಪ್ರಭಾವಳಿ ॥ಬದ್ಕ್‌ನ॥

ಇಂದ್ ನೀನ್ ಬದ್ಕಿ ಹೋರಾಡೊಕು...
ಬದ್ಕಿ ದೇಶ ಉಳ್ಸೋಕು।
ಹುತಾತ್ಮ ನಿನ್ನಪ್ಪ-ಹಾಲುಣ್ಸಿದ ನಿನ್ನವ್ವ
ಅವರಾತ್ಮಕೆ ಶಾಂತಿ ಸಿಕ್ಕೋಕು ॥ಶಾಂತಿ॥

✍ ಕಣಜಾಲ್ ಪೂವಯ್ಯ

# ಸಾಹಿತ್ಯ ಹ್ಯಾಂಗೆ?

ಸಾಹಿತ್ಯ ಹ್ಯಾಂಗೆ ಸಾಗ್ತಾವುಟ್ಟುಂತ ಕೇಳ್‌ದುಲೆ ನಾ
ಚೆಂಬುಲಿ ಸಾಹಿತ್ಯ ಸುರಾಗುಟುತ ಬಾತ್ ವಾಟ್ಸಾಪ್‌ಲಿ
ಕಳ್‌ಸಿದವು ಯಾರ್‌ತ ಗೊತ್ತೆ ಆತ್‌ಲೆ!! ಅದರ್‌ಲಿ
ಎಂ.ಜಿ. ಕಾವೇರಮ್ಮನವುಕೆ ಎಂಬತ್ತರ ಸವಿನೆನ್ಪ್‌ಲಿ
ರಾಜ್ಯ ಮಟ್ಟದ ಅರೆಭಾಷೆ ಕವನ ವಾಚನ
ಗೊತ್ತಾಗಿ ಅಚ್ಚೆರಿ ಆತ್! ವಯ್‌ಸ್ ಎಷ್ಟ್ ಬ್ಯಾಗ ದಾಟಿದೆತ

ನಮ್ಮ ನಿಮ್ಮ ಭೇಟಿ ಆಗಿತ್ತಂದ್ ದಶಕೃತಿ ಬಿಡುಗಡೆ ದಿನ
ಹಿರಿಯ ವಿದ್ವಾನ್ ಟಿ.ಜಿ. ಮುಡೂರುರಂತವರೊಟ್ಟಿಗೆ
ನಿತ್ತ್ ತೆಗ್‌ಸಿದ ಫೋಟೋ ಅರೆಭಾಷೆ ಅಕಾಡೆಮಿಲಿ ವುಟ್ಟು.
ಆದರೂ ಸಾಧನೆ ಕಮ್ಮಿಯೇನಲ್ಲ, ಅರೆಭಾಷೆನ ಭಂಡಾರನೇ ನೀವು.
ನಿಮ್ಮ ಲೇಖನ ಕೃತಿಗಳ್‌ನ ಓದಿದ್ ಕೃಷ್ಣ ಕಂಪ್ಯೂಟರ್ ಪೆಟ್ಟಿಗೆಲಿರ್‌ಕನ
ಯಾರೋ ಸಲಹೆ ಕೇಳ್ದೊ ನನ್ನ ಅರೆಭಾಷೆ ಶಬ್ದದ ಬಳ್‌ಕೆ ಬಗ್ಗೆ॥

ಅರೆಭಾಷೆ ಅಕಾಡೆಮಿ ಹೊರತರ್ತಾಯಿರ್‌ವ ಕೃತಿಗಳ ಭಂಡಾರದ
ಪ್ರಶಸ್ತಿ ಪಟ್ಟಿಲಿ ನಿಮ್ಮ ಹೆಸ್‌ರ್ ಕಂಡ್ ಮತ್ತೊಮ್ಮೆ ಕುಸಿ ಆತ್॥
ಸಾಹಿತ್ಯಲಿ ಹಿರಿತನಲಿ ದೊಡ್ಡವು ಆಗೊಳರಿ.
ಕಿರಿಯೊವುಕೆ ಇದರ ರುಚಿ ತೋರ್‌ಸಿ ಕೊಡ್ತಾವಳರಿ.
ದೇವ್ರು ಹಿಂಗೇಯಿಟ್ಟಿರ್‌ಲಿ ನೂರು ದಾಟಿ ಜೀವನಲಿ॥
ತಾಯಿ ಕಾವೇರಿ ದಯೆ ಶೃಂಗೇರಿ ಶಾರದಾಂಬೆ ಕೃಪೆ ನೀವ್‌ಗಿರ್‌ಲಿ

✍ ಬೈತಡ್ಕ ಜಾನಕಿ ಬೆಳ್ಯಪ್ಪ

# ಹಾರೈಕೆ



ಅಮ್ಮನ ಪ್ರೀತಿಯುಟ್ಟು
ಅಪ್ಪನ ಒಲವು ಉಟ್ಟು
ಪೊರ್ಲ್ ಆಡಿ ಬೆಳೆಕು ಕಂದಾ
ನೀನ್ ಬಾಳಿ ಬೆಳಕಾಕು ಕಂದ॥

ಬಂಧನದ ಬೇಲಿ ಹಾಕಿ
ಮಮತೆನ ಬಳ್ಳಿ ಹಬ್ಬ್‌ಸಿ
ಜ್ಞಾನದ ಜ್ಯೋತಿ ಹೊತ್‌ಸಿ
ಬದ್‌ಕಿ ಮರವಾಕು ಕಂದ॥

ಹೆಸರ್ಲಿ ಉಸಿರಾಗಿ
ಹುಸುರುಲಿ ಹೂವಾಗಿ
ಹಾಡಿ ಹೊಗೊಳುಕು ನಿನ್ನ
ಕರ್ದ್ ಮುದ್ದಾಡುಕು ಕಂದಾ॥

ವೀರನ ವೇಶ ಹಾಕಿ
ಧೀರನ ನಡ್ಗೆ ನಡ್ದ್
ಜೋರುಲಿ ನಗಾಡಿಕಂಡ್
ಬದ್ಕ್ನ ಬಂಗಾರ ಮಾಡ್ ಕಂದಾ
ನೀನ್ ಬಾಳಿ ಬೆಳಕಾಕು ಕಂದ
ಅಪ್ಪ-ಅವ್ವನ ಮುದ್ದುಕಂದ ॥

✍ ಕೀರ್ತನ ಕೊಡಪಾಲ.

# ತಿರ್ಗಿ ಪೋಯಿ ಹಳ್ಳಿಕಡೆಗೆ

ಆಟಿ ಕಳಂಜ ಬರ್‌ಲಿ ಮನೆ ಮನಗಳ ಬೆಳಗಲಿ
ಡೋಲು ಸದ್ದ್‌ನ ಜೊತೆ ಗಗ್ಗರದ ಶಬ್ದ ಕೇಳಲಿ
ಒಳ್ಳೆ ಮಳೆ ಬರ್‌ಲಿ ವರ್ತೆ ನೀರ್ ಜಿನುಗುತಿರ್ಲಿ
ಓ ಭೂ ತಾಯಿ ನಿನ್ನ ಮುಕಲಿ ಸದಾ ನಗು ಇರ್ಲಿ
ಬೊಳುವಾ ಹಲಸಿನ ಹಣ್ಣ ಬುಡಿಸಿ ತಿನ್ನುಕನ ಇರ್ಲಿ
ಸುತ್ತಲು ಅಕ್ಕಪಕ್ಕದ ಎಲ್ಲಾ ಮನೆಜನರೂ ಬರ್ಲಿ
ಹಣ್ಣು ಉಳ್‌ದರೆ ಲಾಯ್ಕನ ಮೂಡೆ ಹಿಟ್ಟು ಬೇಯ್ಲಿ
ಕಜ್ಜಾಯ ಹುರಿಯಕನ ಮನೆ ತುಂಬಾ ಘಮ ಬರ್ಲಿ
ಸುರು ಸುರು ಸದ್ದ್ ಬರ್ಲಿ ವಾಟೆ ಉಪ್ಪನಕಾಯಿ ಚೀಪುಕನ
ಬಾಳೆಲೆ ಗಂಜಿ ಊಟ ಮಾಡ್‌ಕನ ಬೆರಳ್‌ಗಳ ನೆಕ್ಕ್‌ಕನ
ಗಟ್ಟಿರ್ಲಿ ಕುಡು ಚಟ್ನಿ ಮೇಲೆ ತುಪ್ಪದ ಸಣ್ಣ ಉಂಡೆ ಇರ್ಲಿ
ತಿಮಿರೆ ಚಟ್ನಿಗೂ ಬಾಳೆಲೆ ಕರೆಲಿ ಹಂಞ ಜಾಗ ಇರ್ಲಿ
ಕೊಯ್ದು ಕಣಿಲೆ ಎರಡು ದಿನ ಗಂಜಿ ನೀರುಲಿ ಇರ್ಲಿ
ಸ್ವಲ್ಪ ಪಾಲು ಹತ್ರದ ಮನೆಗೆ ಕೊಡುವ ಬುದ್ದಿ ಬರ್ಲಿ
ಪತ್ರಡೆ ಕೆಸ ಯಾವ ಮರಲಿ ಉಟ್ಟು ನೋಡಿಕಣಿ
ಯಾರಿಗಾದ್ರು ಹೇಳಿರೆ ಅದ್ ಸಿಕ್ಕಿಕಿಲೆ ತಿಳ್‌ಕಣಿ
ಆಟಿ ಸೊಪ್ಪುನ ಪಾಯ್ಸ ಮೇಲೆ ತೇಲುವ ಹಸು ತುಪ್ಪ
ಜೊತೆಗೆ ಹಲಸ್ನಾ ಹಪ್ಪಳ ಮಾಯಿನ ಹುಳಿ ಸಂಡಿಗೆ
ಹಲ್‌ಸ್ನ ಬೀಜದ ಸಾರ್ ಜೊತೆಗೆ ಇನ್ನೆರಡ್ ಬಗೆ ಕಾಳ್
ಜೊತೆಗೆ ಸವಿದರೆ ಅದೇ ಸ್ವರ್ಗ ಹೌದಲ್ಲ ನೀ ಹೇಳ್
ದೂರಲಿರುವ ಮನೆ ಮಕ್ಕ ಮರೆಯದೆ ಹಳ್ಳಿಗೆ ಬರ್ಲಿ
ಬದುಕ್ ಕೊಟ್ಟ ಭೂಮಿಗೆ ಕೈ ಮುಗಿಯಕೆ ಮರಿಯದಿರ್ಲಿ
ಮನೆದೇವರ ಗುರುಹಿರಿಯರ ನೆನೆಯುವ ಪದ್ದತಿ ಇರ್ಲಿ
ಮಾಡಿದ ಅಡಿಗೆನ ಸುರುಗೆ ಅವುಕೆ ಬಡ್ಸುವ ನೆನಪಿರ್ಲಿ
ಪೇಟೆ ಬದುಕ್ ಅರವತ್ತರವರೆಗೆ ಕೈಕಾಸ್ ಇರುವವರೆಗೆ
ಅಂತರ್ಜಲ ಕುಸಿವವರೆಗೆ ಸಿಹಿಗಾಳಿ ಸಿಕ್ಕುವವರೆಗೆ
ಮರಳಿ ಪೋಯ್ ಹಳ್ಳಿಕಡೆ ಕಷ್ಟವಾದರೂ ಅದ್ನಮ್ಮದೇ
ಕಷ್ಟ–ಸುಖ ಆದರೂ ಸಂಸ್ಕೃತಿ ಉಳ್ಸುವ ಕೆಲ್ಸ ನಿಮ್ಮದೇ

✍ ಚಿತ್ರಾ ಯತೀಂದ್ರ, ಹೊದ್ದೆಟ್ಟಿ

# ಬೇಟೆನ ಗಮ್ಮತ್ತ್

ಬೊಗ್ಗನು ಮರ್ದುಟ್ಟು ಬೊಗ್ಗಿನ ಕರ್ದುಟ್ಟು
ಗುಡ್ಡೇಲಿ ದರ್ಗ್ನ ಸದ್ದಾತ್...
ಅಪ್ಪನು ಎದ್ದೋಳೊ ಅಮ್ಮನ ಕರ್ದೋಳೊ
ಕಣ್ಣ ಚಾಯನು ಕುಡ್ದಾತ್...
ಲೈಟುನ್ನ್ ಕಟ್ಟಿದೊ ಬೆಡಿನೊ ಹಿಡ್ಕೊಂಡೊ
ಮಂಜನ ಕರ್ಕಂಡ್ ಮನೆ ಇಳ್ದೋ...
ಗದ್ದೇನೂ ದಾಟಿದೊ ಗುಡ್ಡೇನೂ ಹತ್ತಿದ್ದೊ
ಬಲ್ಲೇಗೆ ಮುಳ್ಳುಗೆ ಬೊಯ್ಕಂಡೋ..
ಎಲೆಡ್ಕೆ ತಿಂದೋ ನೆಸೆನೂ ಎಳ್ಕೊಂಡೊ
ತೆಟ್ಟುಲಿ ಬೊಚ್ಚಲ್ ತೆಕ್ಕಂಡೋ..
ಮುಂಡಾಸು ಸರಿಮಾಡಿ ಲೈಟುನ್ನ ಹಾಕಿದ್ದೊ
ಹಂದಿನು ಚುಕ್ಕಿದ ಗುರ್ತಿತ್...
ಮುಂದೇನೆ ಹೋದೊ ಗುಡ್ಡೇನ ಇಳ್ದೋ
ಖಡ್ಗಂಲಿ ಒಂಟಿಜ ಮಲಗಿತ್ತ್...
ಹಕ್ಕಲೆ ಸದ್ದಾತ್ ಹಂದಿನು ಓಡಿತ್ತ್
ಕುಂಬುನ ಗೆಲ್ ಮುರ್ದಿತ್ತ್..
ಅಪ್ಪನು ಓಡಿದ್ದೊ ಮಂಜನು ಹಿಂದಿತ್ತ್
ಹಂದಿ ಕಡವುನ ದಾಟಿತ್ತ್.....
ತಿಂಗಳ್ ಕಂಡಿತ್ತ್ ಗಂಟೆನು ನಾಕಾತ್
ಪೋಯಿನೆ ಮನೆಗೆ ಅಂತೇಳ್ದೋ..
ಬಾಕನ ಮನೆಕ್ಕಲೆ ಕಣ್ಣ್‌ನ ಕೊಟ್ಟತ್ತ್
ಅಪ್ಪನ ಗುಂಡುನ ಸದ್ದಾತ್...
ಮಂಜನು ಓಡಿತ್ತ್ ಅಮ್ಮನು ಎದ್ದಿದ್ದೋ
ನೋಡಿರೆ ಕೊತ್ತಿ ಸತ್ತ್ ಮಲಗಿತ್ತ್..
ಬಾಯಿಗೆ ಬಂದದ್ ಹೊಟ್ಟೆಗೆ ಇಲ್ಲೆಂತ
ಒಲ್ಲಿ ಹೊದ್ದು ಮಲಗೀ.... ದೊ

✍ ಯತಿ ಶ್ಯಾಂ

# ನಿನ್ನೆ-ಇಂದ್

ಕುರ್ ಕುರ್, ಲೇಸ್‌ಗಳ ಹಿಡ್‌ಕಂಡ್ ಇರುವ ಕೈಗಳ
ನೋಡ್‌ಕನ ನಂಗೆ ನೆನಪಾದೆ ನೆನಪಾಗ್‌ತಲೇ ಹೋದೆ.

ಕಣ್ಣಚಾಯ, ಬಾಳ್‌ದ ಕಾಯಿಯೊಟ್ಟಿಗೆ ತಿಂಬ ಹಲ್‌ಸನ ಹಪ್ಪಳ
ಸಾಂತಣಿ, ಹುಳಿಬೀಜ, ಕೆಸದ ಗೆಂಡೆಯ ಸಾರ್, ಮನಸ್ಸಿಗೆ ಹಾಕಿದೆ ಗಾಳ

ಉಗ್ಗಪ್ಪನ ಕಿಳ್‌ಜೊಳ್ ಹೇಳ್‌ದೆ ನೇಜಿ ನೆಟ್ಟ ಕಷ್ಟದ ಜೀವನ
ಬಣ್ಣ ಬಣ್ಣ, ಬರೆ ಬರೆ ಇರುವ ಕೊಡೆಗಳ ಕಾಲ್ ಕಡ್ಡಿ

ಮುರ್‌ದ್ ಹೋದೆ, ಒಂದೇ ಗಾಳಿ ಮಳೆಗೆ
ಎಚ್ಚರ ಕೊಟ್ಟದೆ! ಶೋಕಿ ಜೀವನ ಒಂದೇ ದಿನ

ರುಚಿಯಾಗಿತ್ತ್ ಎಸಂಡ್, ಅಣ್‌ಂಬು, ಬೀಜ ಹಲ್‌ಸನಕ್ಕಿ-ಸೋಂತೆ ಗೈಪು
ಇದರ ಮೀರ್‌ಸ್‌ಕೆ ಆಕಿಲೆ ಇಂದ್‌ನ ಪನ್ನೀರ್ ಮಸಾಲದ ಕಂಪು

ಒಲೆ ಚಿಂಟೇಲಿ ಕುದ್ದು, ಬೀಜ ಕಿಚ್ಚ್ ಹಾಕಕ್‌ನ ಬರುವ ಸದ್ದ್
ಹೊರಗೆ ಚಿಣೇಲಿ ಕುದ್ದ ಅಪ್ಪ ಕೂಡಾ ಬರುವ ಎದ್ದ್

ಚುಳ್ಳಿರ್ ಮಾಣಿಕನ ಗುಂಡಿ ಈಗ ಮುಚ್ಚಿ ಹೋವುಟು
ನೊರ್‌ವಳ್ ಕಾಯಿ, ಸೀಗೆಹೊಡಿ ಪಂಜಲಿನೊಟ್ಟಿಗೆ ಸೇರಿ, ನೊರೆಬರ್‌ತ್ತ ಉಟ್ಟು

ಗೊಬ್ಬರ ಎಳೆಯದೆ ಇಸ್‌ಮುಳ್ಳು ಕುಂಬಾವುಟು
ರೇಷ್ಮೆಹುಳದಾಂಗೆ ಕಂಡ ಗೊಬ್ಬರದ ಹುಳ ಈಗ ಎಲ್ಲಿ ಸೇರಿಟ್ಟು?

ಲಾಲಿಪದ, ಊಟ ಮಾಡ್ಸಿಕೆ ತೋರಿಸುವ ಚಂದಮಾಮ.. ಎಲ್ಲಿಟ್ಟು?
ಎಲ್ಲರ ಕೈಯೊಳಗಿರುವ ಮೊಬೈಲಿ 'ಪೂರಾ' ಸೇರಿಕಂಡಾವುಟು.

ಹೇಳದೆ ಬರುವ ನೆಂಟ್ರ್‌ಗಳ ಕಾಂಬಕಾಕನ ಆವ ಖುಷಿ
ನುಂಗಿ ಹಾಕಿಟು, ಅವರ್‌ಂದ ಮುಂದೆ ಬರುವ ವಾಟ್ಸಪ್ ಮೆಸೇಜ್‌ನ ಬಿಸಿಬಿಸಿ

ಒಂದ್ ದಿನದಿ ಮುಗ್‌ದದೆ ಹೊಸ ನೆಂಟ್ರ್‌ಮನೆಗೆ ಹೋದು, ವೀಳ್ಯಶಾಸ್ತ್ರ ಮೊದುವೆ
ಈಗನ ಹೈದ-ಗೂಡೆಗಳಿಗೆ ಒಂದೇ ಬಳಿ ಆದರೂ ಆದವೆ.

ಮೊಡ್‌ಪಳೆ, ಚಿಡಂಕ್, ಮೆಟ್ಟ್‌ಕತ್ತಿ, ಸುಂಪೆ, ಕದಿಕೆ ಇದೆಲ್ಲ ಕಾಂಬಕಿಲ್ಲೆ
ಬೆಂಡ್‌ಕುಕ್ಕೆ, ಚಿಬ್ಬ್‌ಲ್, ಬೆಸಗೆ, ರಾಗಿಕಲ್ಲ್ ಎಲ್ಲಿಯೂ ಇಲ್ಲೆ

ನೀರಡಿ ಒಲೆನ ಬೂದಿಲ್ ಚುರ್‌ಚಿಕಂಡ್ ಮಲಗುವ ಕಂತ್ರಿ
ನಾಯಿಗೂ ಇತ್ತ್ ಬೊಗ್‌ಳುವ ಶಕ್ತಿ.
ಕಬ್ಬಿಣದ ಗೂಡ್‌ಲಿ ಇರುವ ಡಾಬರ್‌ಮನ್‌ಗೆ ಎಲ್ಲಿಟ್ಟು ಯಜಮಾನನ ಬಗ್ಗೆ ಭಕ್ತಿ?

ಬೆರ್ಚಪ್ಪನ ನೋಡಿ ಹೆದ್‌ರುವ ಕಾಲ ಹೋತ್
ರೊಬೊಟ್‌ನೊಟ್ಟಿಗೆ ಜೀವನ ಮಾಡುವ ಕಾಲ ಬಾತ್

ನರೆ ತಿಂದ್ ಕುಮೇರಿ ಕೆಲಸ ಮಾಡ್‌ದವರ ಮುಂದೆ
ಜಿಮ್‌ಗೆ ಹೋಗಿ ಬಂದರೂ ಕಡಿಮೆ ಆದ್‌ಲೆ ಬಿ.ಪಿ. ಶುಗರ್‌ನ ಮಂದೆ

ಮನೆ ಮಾತ್ ಮರ್‌ತ್ ಹೋಗಿ, ಅಜ್ಜ-ಅಜ್ಜಿ ಅರೆಬಾಸೆ ಮಾತಾಡ್‌ತಿದ್ದೊ!
ಈ 'ಇತಿಹಾಸ' ಬಾಕುಟ್ಟೋ ಹೆಂಗೆ?
ಎಲ್ಲವೂ ಆಲೋಚನೆ ಮಾಡೋನೊ, ಹಿಂಗಾದರೆ ಹೆಂಗೆ?

✍ ಸಹನಾ ಗಿರೀಶ್

# ಕಾಲ ಬದಲಾಗುಟು!

ಈ ಯಾಂತ್ರಿಕ ಕಾಲಲಿ ಜೀವ್ನ
ಸಾಗ್ಸಿಕೆ ಪೇಟೆಯತ್ತ ಮಕ್ಳ ನೋಟ
ಅಪ್ಪ ಅವ್ವನ ಮಾತಾಡ್ಸಿಕೆ ಮಕ್ಕಳಿಗೀಗ
ಪುರ್ಸೊತ್ತೇ ಇಲ್ಲೆ, ನೋಡ್ಕಂಬಕೆ ಆಳ್,
ಹೊಟ್ಟೆ ತುಂಬಾ ಹಿಟ್ಟ್ ಇದ್ದರ್
ಮನ್ಸಿಗೆ ನೆಮ್ಮದಿನೇ ಇಲ್ಲೆ॥

ಅಂದ್, ಹೊತ್ತಾರೆದ್ದ್ ಚುಮು-ಚುಮು
ಮೈಕೊರೆವ ಚಳಿಲಿ ಹಕ್ಕಿ-ಪಕ್ಕಿಗಳ
ಕಲರವಲಿ, ಜೋಡಿ ಎತ್ತ್ಗಳ ಜೊತೇಲಿ
ಗದ್ದೆ, ತೋಟಾಂತ ದುಡ್ದ ಅಪ್ಪನ ಎಲುಬುಗ॥

ಮಂಡಿಗಂಟ ಸೀರೆ ಉಟ್ಕಂಡ್
ಕಿಡಂಜೊಳ್ ಮುಚ್ಕಂಡ್
ಗದ್ದೇಲಿ ನಾಟಿಮಾಡಿ ಆಟಿ ತಿಂಗಲಿ
ಹಲ್ಸಿನಿಟ್ಟ್, ಪತ್ರೊಡೆ ಮಾಡ್ಕೊಟ್ಟ
ಅವ್ವನ ನೆಂಪ್ ಮತೋ೯ತ್ ಇಂದ್॥

ಒಂಬತ್ತ್ ತಿಂಗ ಹೊತ್ತ್ ಹೆತ್ತ್ ಸಾಕ್ದ್ ಅವ್ವ
ಯಾರಿಗ್ ಮಾಡ್ತ್ಲೆ ಬೇಧ-ಭಾವ
ಒಡ ಹುಟ್ಟಿದವ್ ಒಟ್ಟಿಗೆ ಆಡಿ ಬೆಳ್ದೊ
ಬಾರಿ ಕುಷಿಲಿ ಕಾಲಾನೂ ಕಳ್ದೊ॥

ಮಕ್ಕ ದೊಡ್ಡ ಕೆಲ್ಸಕೆ ಸೇರೊಕು ಅಂತ್ಹೇಳಿ
ಓದಿಸಿದೊ ಹೆತ್ತವು ಬಾರಿ ಶ್ರಮಲಿ
ಸಾಕಿಕೆ ಕಷ್ಟ ಆದೇಂತ್ಹೇಳಿ, ಮಕ್ಕ ಇಂದ್
ಅಪ್ಪ ಅಮ್ಮನ ಬುಟ್ಟ್ ಬಂದವೆ ವೃದ್ಧಾಶ್ರಮಲಿ॥

ಮಾತೇ ಮರ್ತ್ ಹೋದವ್ರಂಗೆ
ಮನೇಲಿ ಕುದ್ಕಂಡ್ ಮಾಡ್ವೆ ಚಿಂತೆ
ವ್ಯವಹಾರನೋ ಅವ್ಯವಹಾರನೋ
ಏನೂಂತ ಗೊತ್ಲೆ, ಕೊಂಬಾರೆಲಿ ಕುದ್ದ್
ಲೆಕ್ಕ ಹಾಕ್ವೆ ದುಡ್ಡಿನ ಕಂತೆ॥

ದೃಷ್ಟಿ ಇದ್ದರ್ ಕಣ್ಣ್ ಕಾಣದಂಗಾಗುಟು
ಬೊದ್ಕುವ ದಾರಿ ಮರ್ತೇ ಹೋಗುಟು
ಪ್ರೀತಿ ವಿಶ್ವಾಸನೇ. ಇಲ್ದಂಗೆ ಆಗುಟು
ಇಂದ್ ಈ ಕಾಲನೇ ಬದಲಾಗುಟು॥

✍ ದೀಪಿಕಾ ಸುದರ್ಶನ್

## ನುಡಿ ಮುತ್ತ್‌ಗ

1. ಬಾಕನ ಇರುವ ಪ್ರೀತಿ ಹೋಕನೂ ಬೇಕ್.
2. ಕೆಲ್ಸ ಆಕೆಮುಟ್ಟ ಪರಿಚಯ, ಆದ ಮೇಲೆ ಮರ್ತವೆ.
3. ವಯಸ್ಸಾದವರ ಉದಾಸೀನ ಮಾಡಿಕಾಗದ್.
4. ನಾಯಿಗೆ ತಿಂಬಕೆ ಹಾಕಿರೆ ಕಂಡಾಕನ ಬಾಲ ಆಡ್ಸಿದೆ.
5. ಕಾಡ್ ಮರಕ್ಕೆ ಮದ್ದ್ ಹೊಡ್ಯೆದುಲೆ.

– ಸಂ.

# ಮಳೆ



ನೋಡು ನೋಡುತ್ತಾ ಬಾತ್
ನೋಡು ನೋಡುತ್ತಾ ಬೀತ್
ನೋಡು ನೋಡುತ್ತಾ ಮುಳ್‌ಗಿತ್ತ್
ನಮ್ಮ ಬೆಟ್ಟ ಗುಡ್ಡಗ

ನೋಡು ನೋಡುತ್ತಾ ತೇಲಿ ಹೋತ್
ಮನೆ ಮಠಗ
ನೋಡ್ ನೋಡುತ್ತಾ ಬರಿದಾತ್
ನಮ್ಮ ಗ್ರಾಮಗ

ನೋಡು ನೋಡುತ್ತಾ ಭರ್ತಿ ಆತ್
ನಮ್ಮ ಗಂಜಿ ಕೇಂದ್ರಗ
ನೋಡ್ ನೋಡುತ್ತಾ ಮರಟ್‌ಕಂಡ್
ಕುದ್ದಿದ್ದೊ ಚಾಂಪ ಚಾಮಿ ಅವ್ವಗ

✍ ಮೇರ್‌ಕಜೆ ಲೋಹಿತ್ ಸೋಮಯ್ಯ

# ದೇವರ ರೂಪ

ದೇವರ ಹುಡ್ಕ್ತ ಹೊರಟೆ ನಾ
ಎಲ್ಲ್ಯಟು ಹೆಂಗುಟು ಅವನೇ ನಾ

ಚಿತ್ರಪಟಗಳಲಿ ನೋಡ್ದ ದೇವರ್ಗ
ಕಂಡತ್ಲೆ ನಂಗೆ ಎಲ್ಲೂ ಹಾಂಗೆ

ಅಮೃತದಂತ ಸಿಹಿ ಮಾತ್‌ಗಡ
ಕೋಗಿಲೆಯಂತೆ ಮಧುರ ಗಡ
ಕೇಳ್ತ ಇದ್ದರೆ ನಮ್ಮನೆ ಮರ್‍ತ್
ತೇಲ್‌ದೆ ಮನ್ಸ್ ಎಲ್ಯೋ ಗಡ

ಹಾಡ್ದೆ ಕರ್ದೆ, ಧ್ಯಾನಲಿ ಬಿದ್ದೆ
ಯೋಗ ಮಾರ್ಗಲಿ ಸಾಧನೆ ಮಾಡ್ದೆ
ಎಲ್ಲೂ ಇಲ್ಲೆ ನಾ ಚಿತ್ರಲಿ ಕಂಡ
ಬೇರೆ ಬೇರೆ ದೇವರ ತಂಡ!

ಕವಿಗಳ ಪದ್ಯದ ಪದಗಳ ನಡುಲಿ
ನಿಂತವ ನನ್ನನೆ ಮರ್‍ತ್‌ಬುಟ್ಟೆ
ಸಾಹಿತ್ಯದ ಜೇನ್‌ನ ನೆಕ್ಕ್‌ತ್ ನೆಕ್ಕ್‌ತ
ಎಲ್ಯೊಳೆತೇಳುವ ಎಚ್ಚರ ತೊರ್ದೆ

ಹರಿವ ನೀರ್‌ನ ದಂಡೆಲಿ ಕುದ್ದ್
ಉಲ್ಲಾಸದ ತರತರ ರೂಪನ ನೋಡ್ದೆ
ಬೀಸುವ ತಂಪ್‌ನ ಗಾಳಿಲಿ ತೇಲಿ
ಹಕ್ಕಿಗಿಂತ ಹಗ್‌ರಾಗಿ ಹೋದೆ

ಬಣ್ಣಬಣ್ಣದ ಅರಳುವ ಹೂಗಳ
ವಯ್ಯಾರದ ಲೋಕಲಿ ಮೈಮರ್ತೆ
ಇಬ್ಬನಿ ತೆರೆದ ಕಾಮನ ಬಿಲ್ಲ್‌ನ
ಪೊರ್ಲ್‌ಗೆ ನಾನ್ ಮಳ್ಳಾದೆ

ಏಕೆ ಬೇಕ್ ಆ ದೇವನ ಹಂಬಲ
ದಿನ ದಿನ ಹೊಸ ಸ್ವರ್ಗ ಇಲ್ಲೇ ಎಲ್ಲ
ಇರಿಕನ ಈ ಭೂಮಿಲಿ
ನಮಿಗದು ಸಿಹಿ ಕಬ್ಬ!
ಕಣ್ಣ್, ಮೂಗು, ಕಿವಿ ನಾಲಗೆಲಿ
ರಸ ರುಚಿ ಗಂಧದ ಸಿರಿ ಹಬ್ಬ

ಸುಖಾನುಭವದ ಭಂಡಾರನೆ ಇದ್
ಎಂದಿಗೂ ಮಾಸದ ಅಕ್ಷಯ ನಿಧಿ ಇದ್
ಕಲ್ತೆ ಹೊಸ ಪಾಠನ, ಪ್ರಕೃತಿಂದ
ಹೊಸ ಹೊಸತಾಗುವ ಚೆಲುವಿನ ಮಾರ್ಗನ!

ಒಳ್ಳೇ ಮಾತ್, ಒಳ್ಳೆ ನಡೆ
ಒಳ್ಳೆ ರೀತಿ, ಒಳ್ಳೆ ನೋಟಲಿ ಕಂಡೆ
ಎಲ್ಲದರ್‌ಲಿ ಹೊಮ್ಮುತ್ತಿರುವ ಆ ದೇವರ ರೂಪನ!

✍ ಶಿವದೇವಿ ಅವನೀಶಚಂದ್ರ

# ಹಿರಿಯರ ನೆಂಪುನ ದಾರಿಲಿ

ಹತ್ತು ಕುಟುಂಬ ಹದಿನೆಂಟು ಗೋತ್ರದ ಬಳಿನವು ನಾವು
ನಮ್ಮ ಕುಟುಂಬಗಳ ದೊಡ್ಡಸ್ತಿಕೆ ಕೇಳೋಕು ನೀವು
ಶೂರ ವೀರ ರೈತ ಜನಾಂಗತ ಮರಿಯಕಾಗದ್ನಾವು
ರೈತನಿಂದ ಮಂತ್ರಿವರೆಗೆ ಹಳ್ಳಿಂದ ದಿಲ್ಲಿವರೆಗೆ ನಮಿಗೆ ಉಟ್ಟು ತಾವು

ಸುತ್ತ-ಮುತ್ತ ಕೃಷಿ ಭೂಮಿ ಹಡ್ಲ್ಬ್ ದ್ಹೋತು
ಹೂಡವು ಇಲ್ಲೆ ಗದ್ದೆ, ಬಿತ್ತವು ಇಲ್ಲೆ ಬೀಜ – ಎಂತಾ ದುರ್ಗತಿ ಬಾತ್
ನಾಟಿಯಿಲ್ಲೆ-ಕಳೆಯಿಲ್ಲೆ ಕೊಯ್ಲು ಒಕ್ಕಲು ಯಾವುದು ಇತ್ಲೆ
ಹೂಡುವ ಎತ್ತ್ಗಳ ಹುಲಿ ತಿಂದೊ-ಸಾಂಕಿದ
ಕೋಳಿಗಳ ಕುದುಕ ಹಿಡ್ದೊ

ಭೂಮಿದ್ಕಂದಾಯ ನಿಂತೇಹೋತ್, ಮಡಿಕೇರಿ ರಾಜಂಗೆ ಚಿಂತೆ ಆತ್
ಏನ್ಮಾಡುದುತ ಯೋಚನೆ ಬಾತ್, ಮಂತ್ರಿ
ಹೇಳ್ದ ಸಲಹೆ ಕೇಳ್ತ್
ಸೀಮೆಗೆಲ್ಲಾ ಡಂಗುರ ಹೊಡ್ಸಿತ್, ಸುಳ್ಯ-ಐಗೂರ್‌ಂದ ಕುಡಿ ಕರ್ಸಿತ್
ಜಮ್ಮಾಭೂಮಿ-ಕಂದಾಯ ಮಾಫಿತ ಡಂಗುರ ಸಾರಿತ್

ನಮ್ಮ ಅಜ್ಜಂದರ್ ಎಲ್ಲಿಂದೆಲ್ಲಾ ಬಂದೊ ಭೂಮಿನೆಲ್ಲಾ ಸಾಗ್ಮಾಡ್ದೊ
ಹಡ್ಲ್ಬೂಮಿ ಹಸಿರಾತ್ರಾಜನ ಖಜಾನೆಗೆ ದುಡ್ಡಾಬ್ತ್

ಗೌಡ್ರ ಆಸ್ತಿಗೆ ಪಟ್ಟೆ, ಕುಟುಂಬಕ್ಕೆಲ್ಲ ಜಮ್ಮ-ಉಂಬಳಿ ದಾಖಲಾತ್
ಅರೆಭಾಷೆ ಗೌಡ್ರ ನೀಯತ್ನೋಡಿ ರಾಜಂಗೆ ಅಂದ್
ಬಾರೀ ಕುಸಿ ಆಗಿತ್ತ್

ಚಿಕ್ಕವೀರರಾಜ ಕಾಶಿಗೆ ಹೋಗಿತ್ತ್ ಆಗಬಾತ್ಪರಂಗಿ ದಂಡ್
ಬೊಂಬಾಯಿ-ಕುಡ್ಲ-ಮಡಿಕೇರಿ ಎಲ್ಲಾ ಕಡೆ ಅವರ ಕಣ್ಣ್ಬಿದ್ದತ್
ಅಲ್ಲಿಗೆ ಬಂದೊ ನಮ್ಮ ದಂಡಾಧಿಕಾರಿ, ಅವರೊಟ್ಟಿಗೆ ಇದ್ದೊ ಸೈನ್ಯಾಧಿಕಾರಿ

ಅವೇ ಗುಡ್ಡೆಮನೆ ವೀರ ಅಪ್ಪಯ್ಯ ಗೌಡ್ರು-ಕೆದಂಬಾಡಿ ಧೀರ ರಾಮಪ್ಪ ಗೌಡ್ರು
ಪರಂಗಿಯವು ವಿಧಿಸಿದ್ದೊ ಸುಳ್ಯಲಿ ಕಂದಾಯ
ತಿನ್ನುವ ಉಪ್ಪಿಗೆ, ಉಗಿಯುವ ಹೊಗೆಸೊಪ್ಪಿಗೆ ಸುಂಕ ಆದಾಯ

ಅವರ್ನ ಓಡ್ಸಿಕೆ ದಂಡ್ನ ಸೇರಿಸಿದೊ
ಅಮರ ಸುಳ್ಯ ಹೋರಾಟ ಅಲ್ಲಿಂದ ಸುರು ಮಾಡ್ದೊ
ಪೆಟ್ಟ್ನ ರಭಸಕ್ಕೆ ಪದರಾಡ್ದೊಡ್ದೊ
ಕೆಂಪು ಮೂತಿನ ಎಲ್ಲಾ ಪರಂಗಿ ಕೋಡಂಗಿಗಳೊ

ಸುಳ್ಯಂದ ಕುಡ್ಲವರೆಗೆ ದಂಡ್ಗೆದ್ದತ್
ಅಪ್ಪಯ್ಯ ಗೌಡ್ರ ಹೋರಾಟಕೆ ಜಯ ದಕ್ಕಿತ್
ನಮ್ಮ ಧ್ವಜ ಬಾವುಟಗುಡ್ಡೆಲಿ ಪಟ-ಪಟ ಹಾರಿತ್
ಸುದ್ದಿ ಕೇಳಿ ಪ್ರಜೆಗಳಿಗೆಲ್ಲಾ ತುಂಬಾ ಕುಸಿ ಆಗಿತ್ತ್

ಪುನ ಬಾತ್ಪರಂಗಿದಂಡ್, ಕೇರಳ ಕಡೆಂದ ಅವರ ಮದ್ದ್-ಗುಂಡ್
ಬಚ್ಚಿ ಹೋಗಿದ್ದ ಗೌಡ್ರ ದಂಡ್ನ ಅವು ಗೆದ್ದೊ
ಸೆರೆಹಿಡ್ದ್ಮಡಿಕೇರಿಗೆ ನಡ್ಸಿ ತಂದೊ
ಕಣ್ಣೊರ್ಸುವ ಸಣ್ಣ ವಿಚಾರಣೆ ಮಾಡಿ
ಅಪ್ಪಯ್ಯ ಗೌಡ್ರ ಶೂಲಕ್ಕೆ ಏರ್ಸಿದೊ

ಹಿಂಗೆಲ್ಲಾ ಉಟ್ಟು ನಮ್ಮ ಹಿರಿಯರ ಕತೆ
ನಾವು ಯಾಗೊಳು ನಡ್ಯಕು ಅವು ನಡ್ದ ದಾರಿ ಜೊತೆ
ನಡ್ಸಿ ಕಂಡ್ಬರ್ತಾವಳೊ ನಮ್ಮ ಜಾತಿಧರ್ಮ, ನೀತಿ ನಿಯಮ
ಉಟ್ಟವೆ ನಾವು ಕಚ್ಚೆ ಪಂಚೆ-ಕೋಟು, ಉಟ್ಟು ನಮಿಗೆ
ರುಮಾಲು-ಬಿಳಿ ಕುಪ್ಪಸ ದಟ್ಟಿ
ಹೆಣ್ಮಕ್ಕಳಿಗೆ ಉಟ್ಟು ಗೇಂಟಿ ಸೀರೆ, ಮುಂದೆ ನೆರಿ

ಉಟ್ಟು ನಮಿಗೆ ಊರ್ಗಳಲಿ ಗೌಡ ಸಂಘ-ಕಲ್ಯಾಣ ಮಂಟಪ
ನೆರೆ ಕರೆ ಒಟ್ಟಿಗೆ ಹೊಂದಿ ಬಾಳುವ ನಮಿಗೆ ಇಲ್ಲೆ ಏನೊಂದು ರಂಪ
ರಾಜ್ಯನ ನಡ್ಸುವ, ದೇಶನೂ ಆಳುವ ತಾಕತ್ನಮ್ಮವುಕೇ ಉಟ್ಟು
ಕುಲ ದೇವುರ್ವೆಂಕಟರಮಣನ ಆಶೀರ್ವಾದ ಬಲ ನಮ್ಮ-ಗುಟ್ಟು.

✍ ವಿಶ್ವನಾಥ್ ಎಡಿಕೇರಿ

# ಸೀರಾಡಿ ದೆವ್ವ

ಸೀರಾಡಿ ದೆವ್ವ ಇಳ್ದ್ ಬಾತ್ ಗಟ್ಟದ ಮೇಲೆಂದ
ಯಾಗ ಏನ್ ಯಾಕೆ ಕೇಳ್ರೆ ಉತ್ತರ ಇಲ್ಲೆ ಪಸಂದ
ಹಿರಿಯವು ಕಟ್ಟ್ಯೊಳೊ ಆಗ ಒಂದು ಸಣ್ಣ ಚಾವುಡಿ
ಹೇಳ್‌ತೊಳೊ ಗಟ್ಟದ ಮೇಲೆ ಇದೇ ಚಾಮುಂಡಿ
ಹಿಂದೆ ನೋಡಿ ಕಾರ್‌ಬಾರ್ ಬಳ್ಳಾಳ ಜೈನ ಅರ್‌ಸ್‌ದ್
ತಪ್ಪಿ ನಡ್ದರೆ ಕಷ್ಟ ಇತ್ತ್ ಅಂದ್ ಇಲ್ಲಿ ಬೊದ್‌ಕುದು
ಆಗ ಇತ್ತ್ ನಮ್ಮ ಊರ್‌ಲಿ ಮುನ್ನೂರು ವೊಕ್ಲ್
ವೊಮ್ಮೆ ಆತ್ ಕಮ್ಮಿ ನೋಡಿ ಜನಕೆ ಆತ್ ಪುಕ್ಲ್
ನಮ್ಮ ಆದಿ ಹೇಳ್‌ತೊಳೊ ಐಗೂರು ಸೀಮೆ
ನಾವ್ಗೆ ಅಲ್ಲಿ ಏನೂ ಇಲ್ಲೆ ಬರಿ ಬೈಲ್ ಸೀಮೆ
ರಾಗಿ ಜೋಳ ಚಾಮೆಕಬ್ಬು ಬತ್ತದೊಟ್ಟಿಗೆ
ಬೆಳೆತ ಇದ್ದೊ ಊರೊವೆಲ್ಲ ಕೂಡಿಕಂಡ್ ಒಟ್ಟೊಟ್ಟಿಗೆ
ಬಿಸು ಕಳ್ದ್ ನಡೆತ ಇತ್ತ್ ದೆವ್ವದ ಕೋಲ
ಮಾಮೂಲಾಗಿ ನಡೆತ ಇತ್ತ್ ವರ್ಸಕೆ ಹನ್ನೆರ್ಡ್ ಕೋಲ
ಕಳ್ಸ್ ನೀರ್ ಮಿಂದ್ ಬರೊಕು ಪೂಜಾರಿ ಆ ದಿನ
ಪುಣ್ಣೆ ನೀರ್ ತರೊಕು ಅಂವ ಸುದ್ದಲಿ ಅದೇ ದಿನ
ರಾತ್ರೆ ಎಲ್ಲ ಸೇರ್‌ತೊಳೊ ಬಂಡಾರ ಮನೆಲಿ
ಅಡ್ಗೆ ಮಾಡ್ವೆ ಜನಂಗ ಸೇರಿ ರಾತ್ರೆ ಜಾವಲಿ
ಕೋಳಿ ಮೂರು ಹುಂಜ ಬೇಕು ಅಗ್‌ಲ್ ಹಾಕ್‌ಕೆ
ಮೂಡ ಬುಡದೆ ಕಾಂಬೊದಿಲ್ಲೆ ದಾರಿ ನಡೆಕೆ
ಬಂಡಾರ ಹೊರ್ಟ್‌ದೆ ವಾಲ್ಗೊದೊಟ್ಟಿಗೆ ಸೂಟೆ ಬೆಳ್ಕ್‌ಲಿ
ಸಬ್ದ ಮಾಡಿ ಹೊಡೆತವೊಳೊ ಜಾಗಟೆ ಕೈಲಿ
ದೂರಕೆ ಕೇಳ್ದೆ ಕಂಬೆಡಿ ಸಬ್ದ ಬಂಡಾರ ಬಾಕನ
ಮೂಡ ಕಂಡದೆ ಚಾವುಡಿ ಹಕ್ಕಲೆ ಬಂಡಾರ ಎತ್ಕನ
ಸೇರ್‌ವೆ ಜನ ಚಪ್ಪರದಡಿಲಿ ಪನಿವಾರ ಮಾಡ್ಕೆ
ಕುದ್ದೊಳೊ ಎಲ್ಲವು ಮುಕ ಮಾಡಿ ದಿಕ್ಕು ಮೂಡಕೆ
ಕಣು ಕರೆಡ ತೊಡೆತುಂಡು ದೊಡ್ಡ ಪೂಜಾರಿಗೆ
ಎಣ್ಣೆ ಕೊಟ್ಟೊ ಚಾವುಡಿ ಎದ್ರ್ ದೆವ್ವ ಕಟ್ಟಂವಂಗೆ
ಮಿಯ್ಯಕೆ ಹೋದೊ ಎಲ್ಲವು ಸೇರಿ ಅರ್ಬಿ ಗುಂಡಿಗೆ
ಮಿಂದ್ ಬಂದೊ ಪೂಜಾರಿ ಸೇರಿ ಎಲ್ಲೊವು ಒಟ್ಟಿಗೆ.

ಅರ್ದಳ ಹಾಕಿದೆ ಬೊಳಿಯ ಅಜಲ ಬೂತ ಕಟ್ಟಿಕೆ
ಬಣ್ಣ ನೋಡಿ ಹೆದ್ರ್‌ತೊಳೊ ಹಕ್ಕಲೆ ಹೋಕೆ.
ಅಕ್ಕಿ ಕಾಯಿ ದುಡ್ಡು ಸೇರಿ ಕೊಟ್ಟವೆ ವಂತಿಗೆ
ಕೋಳಿ ಸೇರಿ ಎರ್ಡ್ ಪಾವು ಅಕ್ಕಿ ಚಿಪ್ಪೊಕ್ಲಿಗೆ
ದೆವ್ವ ಎದ್ದ್ ಸುತ್ತ ನೋಡಿ ಅಣೆ ಕಟ್ಟಿಕಂಡ್
ಮೋರೆಗೆ ಕಟ್ಟೊಳೊ ಚಂದನ ಮುಕ ಕತ್ತಿ ಹಿಡ್ಕಂಡ್
ಬಾತ್ ದರ್ಸನ ಹೂವೆಕ್ಕಿ ಹಾಕುವೆ ದೆವ್ವ ಹಿಡ್ತ್‌ಂತ
ಹಿಂದೆನ ಸಾತ್ರಲಿ ಹೆಣ್ಮಕ ಮಾತ್ರ ದೂರ ನಿಲ್ಲೊಕುಂತ
ಮಡ್ಯಳ ಹಾಕಿದೆ ದೆವ್ವದ ಮೇಲೆ ಪುಣ್ಣೆ ನೀರ್‌ನ
ಕಾಯಿ ಇಸಿ ಪಡಿಯಕ್ಕಿ ಕೊಟ್ಟದೆ ಪೂಜಾರಿ ಮೋಹನ
ಪಾಡ್ದನ ಹೇಳ್ವೆ ದೆವ್ವದ ಕಾರ್ಣಿಕ ಕತೆ ಹೇಳ್ಕಂಡ್
ನಿತ್ತೊಳೊ ಎಲ್ಲಾ ಚಾವುಡಿ ಸುತ್ತ ಕೈ ಮುಕ್ಕಂಡ್
ಮೊಗ್ಚಿತ್ ಕಣ್ಣ್ ಆಕಾಸ ನೋಡ್ತ ಸಿಟ್ಟಲಿ ನಡ್ಗ್‌ತ
ಗೊತ್ತಿಲ್ಲೆ ಯಾರಿಗು ದೆವ್ವಕೆ ಸಿಟ್ಟ್ ಯಾಕೆ ಬಾತ್‌ಂತ?
ಸಂಸಯ ಬಾತ್ ಎಲ್ಲವು ಹೇಳ್ದೊ ಬಾರಿ ತಪ್ಪು ಬಂದುಟುಂತ
ಪ್ರಾರ್ತನೆ ಮಾಡ್ದೊ ಎಲ್ಲೊವು ಸೇರಿ ಮಾಪು ಮಾಡೊಕುಂತ
ಕೈಯೆತ್ತಿ ಹಿಡ್ದೊ ಜೋಡು ಬೆಂಡನ ದೆವ್ವದ ಎದ್ರಿಗೆ
ಸಾಂತ್ ಆತ್ ಸೀರಾಡಿ ದೆವ್ವ ಆಗನ ಮಟ್ಟಿಗೆ
ಜೋಡು ಬಾರಣೆ ಕೊಡ್‌ತವೊಳೊ ಬಂಡಾರ ಮನೆವು
ಕಷ್ಟ ಸುಕ ಹೇಳ್‌ತೊಳೊ ಅಲ್ಲಿ ವೊಟ್ಟು ಸೇರ್ದೊವು
ಒಂದು ನ್ಯಾಯ ಬಾತ್ ನೋಡಿ ಕರಿನಾಯಿ ಸತ್ತದ್ದ್
ಕಟ್ಟ್ ಮಾಡಿ ದೆವ್ವ ಹೇಳ್ತ್ ನುಡಿ ಸತ್ಯದ್ದ್
ತೊಂದರೆ ಕಂಡಿತ ಕಾಣ್ಬು ನೋಡಿ ನಾಯಿ ಕೊಂದವಂಗೆ
ಆಕೇ ಇಲ್ಲೆ ಎಂದಿಗೂ ಅವನ ಮಕ್ಕಳ ಏಳಿಗೆ
ಬಿಂದ್ ಪಡೆಕೆ ದೆವ್ವ ಹೊರ್ಟ್‌ತ್ ಮಾರಿ ಕಳಕೆ
ಸಾಲ್ ನಿತ್ತುಟು ಹಂದಿ ಕೋಳಿ ತಲೆಕೊಯ್ಯಕೆ
ಹತ್ತ್ ಜನ ಸೇರ್‌ರೆ ನೋಡಿ ಊರ್‌ಲಿ ವೊಗ್ಗಟ್ಟ್
ಹಿರಿಯವು ಹೇಳ್ದೊ ಯಾಗೋಳು ಬರ್‌ಲಿ ಊರಿಗೆ ಸಂಪತ್ತ್
ಯಾವ ಕತೆ ಯಾವ ಊರ್ ಅಂದಾಜಿ ಮಾಡಿ
ಕೊಲ್ಲ ಮೊಗ್ರ ನೆಲ್ಲೂರು ಕಾಡಿನ ಸೀರಾಡಿ ಚಾವುಡಿ.

✍ 'ವ್ಯಾಸ'

# ಚಿಂತೆ



ಮನಸ್ಸ್‌ನ ಚಿಂತೆಗೆ ಮೊದ್ದುಟ್ಟ ಹೇಳಿ
ತಡಿ ಮುದಿ ಆತ್ ಕೈಲೊಂದು ಆದುಲೆ
ನಡೆಕಾರ್ ಬೇಕು ಕೈಗೊಂದು ದೊಣ್ಣೆ
ನಿಲ್ಲಿಕೆ ಆಸರೆ ಬೇಕೊಂದು ಪಕ್ಕ ॥ ಮನಸ್ಸ್ ॥

ಕರ್ದರೆ ಕೇಳುದು ಅದ್ ಕೂಡ ಮಂದ
ಕಣ್ಣ್‌ಲಿ ಪರೆ ಬಂದ್ ಕಾಣಿಕೂ ಇಲ್ಲೆ
ಹಲ್ಲೆಲ್ಲ ಉದುರೋಗಿ ಬೊಕ್ಕು ಬಾಯಾಗಿ
ತಿಂಬಕೂ ಆದುಲೆ ಸರಿಯಾಗಿ ಅಗ್ದ್ ॥ ಮನಸ್ಸ್ ॥

ತಿಂಬಕೂ ಆಸೆ ಕುಡಿಯಕು ಆಸೆ
ಕರುಣೆಲಿ ಮಕ್ಕ ತಂದ ತಿಂಡಿ ತಿಂಬೊದಾಸೆ
ಮಾಡಿದ ಕೆಲ್ಸನ ನೆನ್ಸಿದ್ದ್ ಚಿಂತೆ
ಮುದಿಯಾದ ಮೇಲಿನ್ನ್ ಸರಿಯಾದು ಇಲ್ಲೆ ॥ ಮನಸ್ಸ್ ॥

✍ ಮಾಲಗೌ

# ಆಶ್ವಾಸನೆ



ಜ್ಯೋತಿಯೊಂದು ಬೆಳಗುತುಟ್ಟು ತನ್ನ ನಿಲುವಿಲಿ।
ಜ್ಞಾನವೆಂಬ ಎಣ್ಣೆ ಹೊಯ್ದ್ ಅದರ ಬೆಳಗಿಸಿ।
ಹುಟ್ಟಿತಪ್ಪ ನಡ್ದದೆ ಅದ್ ಪುಟ್ಟ ಹೆಜ್ಜೆಲಿ।
ಕೈನ ಹಿಡ್ದ್ ನಡ್ಸೊಕಪ್ಪ ಅಂದ ಚೆಂದಲಿ ॥ಜ್ಯೋತಿ॥

ಒಳ್ಳ ಮಾತ್ ಒಳ್ಳ ನಡತೆ ಇರ್‍ಸಿ ಜ್ಯೋತಿಗೆ।
ಭಾಗ್ಯದಾತೆ ಬೆಳಕ್ ಬೀರಿ ಮುಂದೆ ಸಾಗಲಿ।
ಅಕ್ಷರದ ಮಾಲೆ ಇರ್‍ದು ಮುತ್ತು ನಂಗೆನೇ।
ಅರ್ಥಮೂಲ ಇರ್‍ಲಿ ಎಂದೂ ಜ್ಯೋತಿಮೂಲಕೆ ॥ಜ್ಯೋತಿ॥

ಇದರ್‍ಲಿರುವ ದಿವ್ಯ ಪ್ರತಿಭೆ ಹುಟ್ಟಿ ಬರೊಕುತ।
ಅರ್ಥಕೋಶ ಹುಟ್ಟೋಕಪ್ಪ ಜ್ಯೋತಿ ಮೂಲದ।
ಜ್ಞಾನಗಂಗೆ ಹರಿಯೋಕಪ್ಪ ಗಟ್ಟಿ ಮುಟ್ಟುಲಿ।
ಜ್ಯೋತಿ ನಾನ್ ಒಳೆಂತೇಳಿ ಎಲ್ಲ ತಾವಲಿ ॥ಜ್ಯೋತಿ॥

ಹುಟ್ಟಿ ಬಂದ ಫಲಕೆ ಇಂದ್ ಲೀಲೆ ತೋರ್‍ಸುತ।
ತನ್ನಲಿದ್ದ ನೀತಿ ಗುಣಗಳೆಲ್ಲ ಹರ್‍ಡಲಿ।
ಜ್ಞಾನ ಜ್ಯೋತಿ ದಿವ್ಯ ಜ್ಯೋತಿ ಎಲ್ಲೂ ಬೆಳಗಲಿ।
ಅರೆಬಾಸೆ ಜ್ಯೋತಿಯಾಗಿ ಇರಲಿ ನಾಡ್‌ಲಿ ॥ಜ್ಯೋತಿ॥

✍ ಮಾಲಗೌ

# ಅರೆಭಾಷೆ ಚುಟುಕಗ

ಎಸ್ಟೊಂದು ಲ್ಯಾಕುಟ್ಟು ಗೌಡ್ರ ಅರೆಭಾಷೆ।
ಕೆಲವುಕದ್ ಗೊತ್ತೇಲೆ ಅದೇ ತಮಾಷೆ ॥
ಅರೆಭಾಷೆ ಗೌಡ್ರಾಗಿ ಹುಟ್ಟಿಯೊಳೊ ನಾವು।
ಅದೆ ಪುಣ್ಯ ಅದೇ ಭಾಗ್ಯ ಏನೇಳ್ರೆ ನೀವು?॥

ನಮ್ಮಪ್ಪ ಅವರಪ್ಪ ಅವರಜ್ಜ ಎಲ್ಲ।
ಮಾತಾಡಿಕಂಡ್ ಬಂದೊಳೊ ಈ ಭಾಷೆನೆಲ್ಲ॥
ಅಂತ ಅರೆ ಕನ್ನಡಿದ್ ಸಾಮಾನ್ಯ ಅಲ್ಲ।
ಅವರ ಬಾಯ್ಗಂದ್ ಬೀಳೊಕಿತ್ತ್ ಕರಿ ಉಂಡೆ ಬೆಲ್ಲ॥

ಅರೆಭಾಷೆ ಸಾಹಿತ್ಯ ಬೆಳಿತುಟ್ಟು ಈಗ।
ಮೊಳಕೆ ಬಾರದೆ ಬೀಜ ಆಗಿತ್ತ್ ಆಗ॥
ಕೆಲ ಕವಿಗ ಅರೆಭಾಷೆ ಕವನಗಳ ರಚಿಸಿ।
ಐವತ್ತ್ ವರ್ಷಾತ್ ಅದರ ಅವು ಬೆಳೆಸಿ॥

ದೈ ಪಸಲ್ ಕೊಡದೆನೆ ಇತ್ತಿಲ್ಲಿ ತನಕ।
ಪಸಲಿನ್ನ್ ಬೇಗನೆ ಕೊಡಲಿಂತ ತವಕ।
ನೂರಾರ್ ಹೊಸ ಕವಿಗ ಈಗ ಹೊರ ಬಂದ್
ಅರೆಭಾಸೆ ಕಥೆ ಕವನ ಬರಿತ ಒಳೊ ಇಂದ್॥

ಅರೆಭಾಷೆ ಸಾಹಿತ್ಯದೊಳಗಿರುವ ಅರ್ಥ।
ಓದಿ ತಿಳಿಯದ ಜನಾಂಗ ಇದ್ದರವು ವ್ಯರ್ಥ॥
ಅರೆ ಕನ್ನಡನ ಮಾತಾಡ್ವ ವ್ಯಾಮೋಹ ನಾವ್ಗೆ।
ಬಾರದಿದ್ದರೆ ಇನ್ನ್ ಬಾದ್ಯಾಗ ನೀವ್ಗೆ॥

ಅರೆಕನ್ನಡದ ಭಾಷೆನ ಸ್ವಾರಸ್ಯ ಎತ್ತಿ।
ತಿಳಿಯದ ಜನರೆದ್'ರ್ ನೀವದರ ಬಿತ್ತಿ॥
ಅರೆಕನ್ನಡನ ಕಲ್ಸಿದ ಅಪ್ಪವ್ವನ ನೆನೆಸಿ।
ಅವರಿಬ್ಬರ ಪರಮ ಪಾದಕ್ಕೆ ನಮಿಸಿ॥

ಅರೆ ಕನ್ನಡದ ಬೆಳವಣಿಗೆ ಏರಲದ್ ಮುಂದೆ।
ಕೆಲ್ಸ ಮಾಡೊಕು ನಾವು ದಿನನು ಅದರ ಹಿಂದೆ॥
ಅರೆ ಕನ್ನಡನ ಜನ ಪೋಂತಿ ತೋರ್ಸಿರೆ ಪ್ರೀತಿ।
ಗೊತ್ತಾದು ಜನಕಾಗ ಅದ್ಕಿರುವ ಶಕ್ತಿ॥

ಹೊರ ದೇಶಕೋದವುನು ಮರ್ತತ್‌ಲೆ ಅದರ।
ಇಲ್ಲಿ ಬಂದರೆ ಬುಡದೆ ಮಾತಾಡ್ವೆ ಇದರ॥
ಅವ್ವ ಕಲ್ಸಿದ ಭಾಷೆಗೆ ಪ್ರೀತಿ ಉಟ್ಟಸ್ಟ್।
ಹೇಳಿಕೋದರೆ ವಿಷಯ ಉಟ್ಟು ಬೇಕಸ್ಟ್॥

ಬೇರೆವರ ಎದ್‌ರ್‌ಗಡೆ ಭಾಷೆ ಮಾತಾಡಿಕೆ।
ನಾಚಿಕೆಂತೇಳಿರೆ ಉಗಿನಿ ಅವರ ಮುಖಕ್ಕೆ॥
ಹೀಂಗೆ ಮಾಡಿರೆ ಭಾಷೆ ನಾವೆ ಕೊಂದಾಂಗೆ।
ಆಡ್ ಭಾಷೆನ ನಾವು ಎತ್ತಿಡಿದು ಹೇಂಗೆ?॥

ಅರೆ ಕನ್ನಡನ ಮಾತಾಡ್ರೆ ಗೌರವನೇ ಬೇರೆ।
ಮೊದುವಳ್‌ತಿ ಕಂಡಾಂಗೆ ಉಟ್ಟ್ ಹೊಸ ಸೀರೆ॥
ಗೌಡ್ರೆಲ್ಲ ಅರೆಭಾಷೆ ಕಲಿಕುಂತ ನನ್ನಾಸೆ।
ಕಲೆಕೆ ಆದುಲೆ ಹೇಳ್ ತೆಗಿ ನಿನ್ನ ಮೀಸೆ॥

ಭಾಷೆ ಬೆಳವಣಿಗೆಲ್ಲವೂ ಕೂಡಿ ಮಾಡೊಕ್ಕು।
ಭಾಷೆ ಜನಂಗೆಲ್ಲವನು ಕೂಡಿ ಬಾಳೊಕ್ಕು॥
ಒಗ್ಗಟ್ಟ್‌ಂತೇಳುದೆ ಅದ್ಕಿರುವ ಮಂತ್ರ।
ಭಾಷೆ ಬೆಳ್‌ಸಿಕೆ ಉಟ್ಟು ನಾವ್ಗೆ ಸ್ವಾತಂತ್ರ॥

ತುಳು, ಅರೆಕನ್ನಡದ ಜನ ಎಲ್ಲ ಒಂದೆ।
ಬರ್ದಳದ್ ಪದ್ಯಲಿ ನಾ ಬಾರಿ ಹಿಂದೆ।
ಅರೆಕನ್ನಡನ ಮಾತಾಡೊವು ತುಳುನು ಮಾತಾಡ್ವೆ
ಎರಡುನೂ ಮಾತಾಡ್ದು ಬೇಡಂತ ಯಾರ್ ಹೇಳ್ವೆ

ಚುಟುಕಗಳ ಬರ್ದದಿದ್ ಭಾಷೆ ಜನಕಾಗಿ।
ಬರ್ದತ್‌ಲೆ ನಾನಿದರ ನಾನ್ ನಂಗಾಗಿ॥
ಈ ಚುಟುಕ ಬರೆಕುಂತ ಆಸಿತ್ತ್ ನಂಗೆ।
ಓದಿರೆ ತೊಪ್ಪಿರ್ದೊ ಇದರೊಳಗೆ ನಿಂಗೆ?॥

ಹಾಡ್ ಬರ್ದ್‌ದ್ ಪುಸ್ತಕನ ಪ್ರಕಟಿಸಿನು ಆತ್।
ಹೇಳುತೊಳೆ ದುಡ್ಡದ್‌ಕೆ ಲಕ್ಷ ಖರ್ಚಾತ್।
ಪ್ರಕಟಿಸಿದ ಪುಸ್ತಕನ ಮಾರಿರೆ ನಂಗೆ।
ಹೇಳಿವೆ ಜನ ದುಡ್ಡ್ ಕೊಡೊಕೇಕೆ ನಿಂಗೆ?॥

ಪುಸ್ತಕನ ಫ್ರೀ ಕೊಟ್ಟರೆಲ್ಲವುಕೆ ಬೇಕು।
ಅಪ್ಪ ಹೇಳ್ಯೊಳೊ ನಂಗೆ ಇನ್ನೊಂದ್ ತರೊಕು॥
ಕಾಸ್ ಕೇಳಿರೆ ಮಾತ್ರ ಬಡತನನೊ ನಿಂಗೆ।
ಹೇಳಿವೆ ಜನ ಕೆಲವು ಹೀಂಗೆನೆ ನಂಗೆ॥

ಅರ್‌ವತ್ತ್ ರೂ...ಗೆಲ್ಲ ಸಿಕ್ಕಿದೆಗಡ ಪೆಗ್ಗ್।
ಪುಸ್ತಕನ ತಕಂಡೊಳ ನೀನೆಂತ ಗೊಗ್ಗ್।
ಬಾರೊಳಗೆ ಹೋದರೆ ಮಜ ಉಟ್ಟು ಅಲ್ಲಿ।
ಪುಸ್ತಕನ ಓದಿರೆ ಬದನೆಕಾಯಿ ಉಟ್ಟೊ ಇಲ್ಲಿ?

ಒಂದ್ ಕಡೆ ಪುಸ್ತಕನ ಬಿಡುಗಡೆ ಸಮಾರಂಭ।
ಬದಿಲಿ ಇನ್ನೊಂದ್ ಕಡೆ ಹೊಸ ಬಾರ್ ಪ್ರಾರಂಭ।
ಒಂದೆ ಸಮಯಲಿ ಎರಡ್ ಕಡೆ ಪೂಜೆ ಆರಂಭ।
ಪುಸ್ತಕಕೆ ಜನ ಖಾಲಿ ಬಾರೊಳಗೆ ನೋಡ್ ಜನ ಎಸ್ಟ್ ತುಂಬಾ

ತಲೆ ಬೊಗ್ಗಿ ಜನ ಹೋವೊ ಬಾರೊಳಗೆ ಮಾತ್ರ।
ಗುಡಿಗೆ ಹೋಕನ ಜನಂಗ ಮಾಡ್ದುಲೆ ಆ ಸೂತ್ರ॥
ಎಲಿನಾಂಗೆ ಇದ್ದವನು ಬಾರ್‌ಲಿ ಕುಡ್ದ್ ತಿಂದ್।
ಹೊರಗೆ ಹೋಕನ ಹುಲಿನೆ ನೋಡಿ ನೀವ್ ಬಂದ್।

✍ ಭವಾನಿ ಶಂಕರ್ ಹೊದ್ದೆಟ್ಟಿ.

# ಡೇಲಿಯಾ ಹೂ



ಮುಂಗಾರ್ ಮಳೆ ಬಾತ್ ಮನೆಮುಂದೆ ಹುಟ್ಟಿತ್ ಡೇಲ್ಯ
ಆಗ ಗ್ಯಾನಾತ್ ನಂಗೆ ನಾನಂದ್ ಕಳ್ದ ನನ್ನ ಬಾಲ್ಯದಿನ
ಸುಖಿಯಾದ ಆ ಗಿಡಲಿ ಅರಳಿತ್ ಪೊರ್ಲಾದ ಹೂ ಡೇಲ್ಯ
ಮಳೆಗಾಲ ಕಳ್ತ್ ಮಣ್ಣ್ ಅಡಿಲಿ ಗೆಂಡೆಗ ಆಗಿ ಅಡ್‌ಂಗಿತ್ ಡೇಲ್ಯ

ಮತ್ತೆ ಸುರಾತ್ ಮುಂಗಾರ್‌ನ ಮಳೆ ಬಾರಿ ಜೋರು
ಹಸಿರ್ ಚಿಗ್‌ರಿ ಬಸುರಿ ಆಗಿ ಗಿಡಲಿ ಅರಳಿತ್ ಡೇಲ್ಯ ಹೂ
ಮೂಡನ ಅಂಗಳಲಿ ನೆಗಡಿಕಂಡ್ ಸಾಲಾಗಿ ಕಾಣುವ ಹೂ ಡೇಲ್ಯ
ಮಳೆ ಜಾಸ್ತಿತ ಮುಖ ಬಗ್ಗ್‌ಸಿದೊ ಹೂಗ

ಭಾರತದ ಮಣ್ಣ್‌ನ ಘಮ ಘಮ ಸೊಗಡ್‌ಲಿ ಹುಟ್ಟಿ
ಬೀಸುವ ಗಾಳಿ ತಂಪಾದ ಹವಾ ನೀಡ್‌ವ ಹಿತ
ಡೇಲ್ಯ ಹೂನ ಸೌಂದರ್ಯದ ಸುಗ್ಗಿ ನಾಕಂಡೆ
ನಮ್ಮ ದೇಶಕ್ಕು ಪರದೇಶಕ್ಕೂ ಉಟ್ಟು ಡೇಲ್ಯ ಹೂನ ಸಂಬಂಧದ ಗುಟ್ಟು.

✍ ಎಸ್.ಕೆ. ಈಶ್ವರಿ

# ಕೋಲಾಟದ ಹಾಡು

ಓ... ಅಕ್ಕ ಬನ್ನಿ ಇಲ್ಲಿ
ಅತ್ತೇ ನೀವು ಕುದ್ರಿ ಇಲ್ಲಿ
ತಮ್ಮಾ ಅಲ್ಲೆ ನಿಲ್ಲಪ್ಪಾ
ಅಣ್ಣಾ ನೀನು ಬಾರಪ್ಪ
ಮಾವ ಯಾಕೆ ನಿಂತರಿ?
ಹಂಗೇ ಸೊಲ್ಪ ಕೇಳ್ಕನಿ!

ಈಗ ನಾನು ಹೇಳ್ನೆ
ವಿಸ್ಯ ನೀವ್ಗೆ ಗೊತ್ತುಟೋ?
ನಮ್ಮ ಬಾಸೆ ಅರೆಬಾಸೆ.. ನಾವ್ಗೆ ಎಲ್ಲ ಗೊತ್ತುಟೂ
ನಮ್ಮ ಹುಟ್ಟು ಬಾಸೆ ಇದೇ.
ಅಜ್ಜ ಪಿಜ್ಜ ಬಾಸೆ ಇದೇ
ಯಾವ ಬಾಸೆ ಏನೇ ಆದ್ರೂ–ಮೊಸರೂನ್ನ ಕಡ್ದಂಗೇ

ಸದ್ದುಗಿದ್ದು ಆದೆ ಗಡ
ಅತ್ತ–ಇತ್ತ ಚೆಲ್ಲಿದೆ ಗಡ
ಮೊಸ್ರು ಕಡ್ದು ಮುಗೆಕನ... ಗುತ್ತಿಲೇನೂ ಇಲ್ಲೆಗಡ

ಬೆಂಣೆ ಮಾತ್ರ ಅಲ್ಲೇ ಇಲ್ಲೇ
ಸುತ್ತು ಮುತ್ತ ಅಂಟುಟು
ಏನ್ ಸದ್ದು ಏನ್ ಗುದ್ದು... ಬಂದವ್ಕೆಲ್ಲಾ ಗೊತ್ತಾತ್ತು!

ಬಂದವ್‌ಕೆಲ್ಲ ಬೆಂಣೆ ಹಂಚಿ
ಕಂಣು ಮುಚ್ಚಿ ಕುದ್ದವೆ
ಹೊಟ್ಟೆ ಚುರ್–ಚುರ್ ಹೇಳ್‌ಕನಾ
ತಂಣೀರ್‌ನಾ ಕುಡ್ದನೆ – ಹೊಟ್ಟೆ ಬಟ್ಟೆ ಗಂಟು ಕಟ್ಟಿ
ಮೈ ಮುರ್ದು ದುಡ್ದ್‌ನೆ

ಬೆಂಣೆ ತಿಂದ ದೋಸ್ತಿಗೆಲ್ಲ
ಅರೆಭಾಸೆ ಗೊತ್ತಾಕು
ನಮ್ದು ಬಾಸೆ ಅರೆಬಾಸೆ ಅರ್ದು ಅರ್ದು ಕುಡ್‌ದ ಬಾಸೆ
ಅತ್ತ ಇತ್ತ ಹೋಕನ ಗಡ.. ಬಾಸೆ ಬಿತ್ತು ಹುಟ್ಟಿತು

ಹೋಗುತ್ತೇನೆ ಹೋ...ನೆ ಆತ್
ಬರುತ್ತೇನೆ ಬನ್ನೆ ಆತ್
ತರುತ್ತೇನೆ ತನ್ನೆ ಆತ್
ಕಂಪ್ಯೂಟರ್ ಬಾಸೆ ನಮ್ಮೊದು
ಅರೆಬಾಸೆ ಎಸ್.ಎಂ.ಎಸ್. ಬಾಸೆ ಓಕೆ.. ಓಕೆ.. ಅಲ್ಲಯಾ?

ಕನ್ನಡವ್ವ ನಮ್ಮ ಅಜ್ಜಿ.. ಸಂಶಯ ಮಾತ್ರ ಬೇಡಾಯ
ಅಜ್ಜಿ ಸೇವೆ ಅವ್ವಸೇವೆ.. ತಾಯ್ ಸೇವೆ ಹೌದ್‌ಯಾ!
ತಾಯ್ ಬಾಸೆ ಅರ್ದ ಆಗಿ.. ಅರೆಭಾಸೆ ಅಲ್ಲಯಾ?

ಕನ್ನಡವ್ವ ಜರೀ ಸೀರೆ.. ಒಂದು ನೂಲು ನಮ್ಮೊದು
ಬಂಣ ಹನ್ಯ ಕಮ್ಮಿ ಆದ್ರೆ.... ಹಾಕೋ ಕೆಲ್ಸ ನಿಮ್ಮೊದು!!

ಅರೆಬಾಸೆ ನಮ್ಮ ಮಾನ
ಅರೆಬಾಸೆ ನಮ್ಮ ಗೇನ
ಅರೆಬಾಸೆ ನೆಲದ ಬಾಸೆ.. ಈ ಮಣ್ಣ್‌ಲೇ
ಕಾಪಾಡಮ್ಮ ಕನ್ನಡವ್ವ.. ನಿನ್ನ ಸೆರಗಿಲೀ!!

✍ ಉಮೇಶ ಬಿಳಿಮಲೆ

ಲೇಖನ

# ಜಗತ್ತೆಲ್ಲಾ ನಗಾಡಿಕಂಡಿರ್ರಿ....

ನಗೆ ಈ ಜಗತ್ತ್‌ನ ಸರ್ವ ಜೀವಿಗಳ್ಲಿ ಮನುಷ್ಯಂಗೆ ಮಾತ್ರ ಭಗವಂತ ಕೊಟ್ಟ ದೊಡ್ಡ ವರತ್ತೇಳ್ವ ವಿಚಾರ ಪ್ರಪಂಚಕ್ಕೇ ಗೊತ್ತುಟು. ಹೆಂಗೆ ಆ ಭಗವಂತ ಒಬ್ಬ ಸರ್ವೋದ್ಧಾರಕನೋ ಹಂಗೇ ನಗೆ ಕೂಡ. ಮಾರ್ಕ್ ಬೈರ್‌ಂತ ಹೇಳ್ವ ಒಬ್ಬ ವಿಜ್ಞಾನಿ ಏನ್ ಹೇಳ್‌ದೆಂತೇಳ್‌ರೆ "ಮಾನವನಲ್ಲಿ ಅತ್ಯಂತ ಪರಿಣಾಮಕಾರಿ ಏಕೈಕ ಅಸ್ತ್ರ ಒಂದು ಇದ್ದರೆ ಅದೇ ನಗು" ಅಂತ ಹೇಳ್ವೆ.

"ನಗುವು ಸಹಜಧರ್ಮ, ನಗಿಸುವುದು ಪರಧರ್ಮ
ನಗುವ ಕೇಳುತ ನಗಿಸುವುದು ಅತಿಶಯದ ಧರ್ಮ,
ನಕ್ಕು-ನಗಿಸುವ, ನಗಿಸಿ-ನಗುತ್ತಾ ಬಾಳುವ ವರವನ್ನು
ನೀ ಬೇಡಿಕೋ ಮಂಕುತಿಮ್ಮ".

ಇದೆಷ್ಟ್ ಅರ್ಥಗರ್ಭಿತ ಅಲ್ಲಾ? ಮತ್ತೊಂದು ಕಡೆ. "ನಗುವುದು ಭೋಗ, ನಗದಿರುದು ರೋಗ" ಹೇಳ್‌ದು ಲೋಕ ಪ್ರಸಿದ್ಧಿ. ಹಂಗಾದರೆ, ನಗೆ ಸದಾ ನಿಮ್ಮದೇ ಆಗಿರ್‌ಲಿ ಅಂತ ನಾನ್ ಹೇಳ್ನೆ. ಈ ಜೀವ ಇರ್ದು ಅಳ್ವದಕ್ಕಲ್ಲ, ಚಿಂತೆ ಮಾಡ್ವದಕ್ಕಲ್ಲ, ಅದರ ಬದ್ಲ್ ಸದಾ ನಕ್ಕಂಡೋ ಬಾಳ್ಕೆ ಮಾತ್ರ.

ನಿಮ್ಮ ದಿನದ ಜೀವನ ಶೈಲಿ ನಿಮ್ಮ ಕೈಲೇ ಉಟ್ಟು. ಬೆಳಗಾಕನ ಶಿವ್ ಶಿವಾಂತ ಹೇಳಿಕಂಡ್ ಎದ್ದ್ ಆದ ಕೂಡ್ಲೆ ನಿಮ್ಮ ಮಕಲಿ ಒಂದು ಮುಗ್ಧನೆಗೆ ನಿಮ್ಮ ತುಟಿಲಿ ಅರಳಕು. ನಗು ಮಕ ಆಶಾವಾದಿತನ ಆ ದಿನದ ಪ್ರಾರಂಭ ಆಕು. ಅದ್ ಬಿಟ್ಟ್ ಸಿಡ್ಕ್ ಅಲ್ಲಾ ಬಾಡಿದ ಮಕ ಹೊತ್ತ್‌ಕಂಡ್ ಆತಂಕಂದ, ಏನೂ ಉತ್ಸಾ ಇಲ್ಲದೆ, ಹಾಸಿಗೆಂದ ಎದ್ದರೆ ಇವ್‌ಗಳ ಕೆಟ್ಟ ಪರಿಣಾಮ ಅಂದ್‌ನ ಎಲ್ಲಾ ಚಟುವಟಿಕೆಗಳುದ್ದಕ್ಕೂ ಹಿಂಬಾಲ್ಸಿಕಂಡ್ ಬಂದದೆ ಅಂತ ಹೇಳ್ದು ಸತ-ಸತ್ಯ. ಇದನ್ನ, ನೀವ್ ಎಂದೂ ಮರೆಕಾಗದ್.

ಇಂತಹ ದಿವ್ಯ ಸಂದೇಶಗಳ್ನ/ಸಂಪತ್ತ್‌ಗಳ್ನ ಇಂದ್ ಬೆಳ್ಸಿಕಂಡ್ ಬರುತಿರ್ವ ಕೂಟಗಳೇ.. "ನಗೆಕೂಟಗ" ಈ ನಗೆ ಕೂಟಗ ಇಂದ್ ಪ್ರಪಂಚದ ಎಲ್ಲಾ ಕಡೆ ಕಾಡ್ಗಿಚ್ಚಿನಂಗೆ ಹಬ್ಬಿಕಂಡುಟ್ಟು. ಹಿಂಗೆ ಬೆಳ್ದ್ ಬೆಳ್ದ್ ಇಂದ್ ಸುಮಾರ್ 100 ದೇಶಗಳಲ್ಲಿ ಸುಮಾರ್ 6000ಕ್ಕೂ ಹೆಚ್ಚಾಗಿಟ್ಟು ಅಂತ ಅಂದಾಜ್ ಮಾಡಿಯ್ಯೊಳೊ. ಹಿಂಗೆ ಪ್ರಪಂಚದ ಸಂಗತಿ ಆದ್ರೆ, ನಮ್ಮ ಭಾರತಲಿ ಇದ್ಕೆ ಅಗ್ರಸ್ಥಾನ ಇದ್ದ್ ಅದರ್ಲೂ ಬೆಂಗಳ್ಳೂರ್‌ಲಿ ಹೆಚ್ಚು-ಕಡಿಮೆ 250 ನಗೆ ಕೂಟಗ ಒಳೊಂತ ಹೇಳ್ರೆ

ನಿಮ್ಗೆ ಆಶ್ಚರ್ಯ ಆದು. ಇದೊಂದ್ ಕರ್ನಾಟಕಕ್ಕೆ ಸಿಕ್ಕಿದ ಹೆಮ್ಮೆ ಅಲ್ಲಾ?

ಈ ನಗೆ ಕೂಟಗ ಹೆಂಗೆ ನಡ್ದ್‌ದೆಂತ ಅದರ ಹೆಚ್ಚಿನ ವಿಚಾರ ಹೇಳ್ನೆ: ಬೆಳಿಗ್ಗೆ 6 ಗಂಟೆಗೆ ಸರಿಯಾಗಿ ನೀವ್ ನಗೆ ಕೂಟಕ್ಕೆ ಕಾಲ್ ಹಾಕಿದಂಗೆ ನಗೆ ಮಕಲಿ ಅಲ್ಲಿ ಬಂದವರ್ನ ಎಲ್ಲಾ ಸ್ವಾಗತಿಸಿ, ಭಗವಂತನ ಹೆಸ್‌ರ್ಲಿ 1 ಪ್ರತಿಜ್ಞೆ ಮಾಡೋಕು. ಆ ಪ್ರತಿಜ್ಞೆ ಈ ಮಾದರಿ. "ನಾವು ಎಂದೂ ಕೋಪಿಸಿಕೊಳ್ಳುವುದಿಲ್ಲ, ಇತರರಿಗೆ ಕೋಪ ಬರುವಂತೆ ವರ್ತಿಸುವುದೂ ಇಲ್ಲ, ದಿನವಿಡೀ ನಗು-ನಗುತ್ತಾ ಇರುತ್ತೇವೆ, ಪ್ರಕೃತಿ ಮಾತೆಗೂ, ನಮ್ಮ ತಂದೆ-ತಾಯಿ, ಗುರು-ಹಿರಿಯರಿಗೂ ವಂದಿಸುತ್ತಾ ಆ ಭಗವಂತನು ನಮಗೆಲ್ಲಾ ಸರ್ವ ಸುಖ-ಶಾಂತಿ ಬಾಳ್ವೆಯನ್ನು ಕೊಟ್ಟು ಕಾಪಾಡಲಿ ಎಂದು ಪ್ರಾರ್ಥಿಸುವ" [ಇದನ್ನು ಎಲ್ಲರೂ ಒಟ್ಟಾಗಿ ಹೇಳಬೇಕು]

**ಅರೆಭಾಷೆಲಿ "ನಾವ್ ಎಂದೂ ಸಿಟ್ಟ್ ಮಾಡಿಕಂಬಲೆ, ಬೇರ್‍ವಕ್ಕೆ ಸಿಟ್ಟ್ ಬರುವಾಂಗೆ ಎಂದೂ ವರ್ತಿಸುದೂ ಇಲ್ಲೆ. ದಿನ ಇಡೀ ನಗು-ನಗುತ್ತಾ ಇದ್ದವೆ. ಪ್ರಕೃತಿ ಮಾತೆಗೂ, ನಮ್ಮ ತಂದೆ-ತಾಯಿಗೂ, ಗುರು-ಹಿರಿಯರಿಗೂ ವಂದಿಸುತ್ತಾ ಆ ಭಗವಂತ ನಮ್ಗೆಲ್ಲಾ ಸರ್ವ ಸುಖ-ಶಾಂತಿ ಬಾಳ್ವೆನ ಕೊಟ್ಟ್ ಕಾಪಾಡಲಿ ಅಂತ ಪ್ರಾರ್ಥಿಸಿವೆ".**

ಈ ಪ್ರತಿಜ್ಞೆ ಆದ ಮೇಲೆ 1 ಗಂಟೆ ಮುಟ್ಟ ನಾನಾ ತರದ ಕಾರ್ಯಕ್ರಮಗ ನಡ್ದವೆ. ಇದ್ ಎಲ್ಲಾ ನಗೆ ಕೂಟಗ ನಡ್ಸವ ಒಂದೇ ರೀತಿ ಕ್ರಮ.

ಇಂದ್‌ನ ಜನ ಜೀವನ್ಲಿ ಹೆಚ್ಚಿನವು ಬೇಕಾದನ್ನ ಹಂಗೇ ಬೇಡದಾದನ್ನ ತಲೆಗೆ ತುಂಬಿ-ತುಂಬಿ ತಲೆ ಒಡೆದೋಗುವಷ್ಟ್ ತುಂಬಿ, ಒಂದು ತರದ ಒತ್ತಡಕ್ಕೆ ಸಿಕ್ಕಿ ಹಾಕಂಡ್ ಅನೇಕ ದೈಹಿಕ, ಮಾನಸಿಕ ರೋಗಗಳಿಗೆ ಬಲಿಯಾಗುತ್ತಾ ಒಳೊ. ಜೀವನ ಕಷ್ಟ-ನಷ್ಟ, ಸೋಲ್-ಗೆಲ್‌ವ್, ಸುಖ-ದುಃಖ ನಿರಾಶೆ ಹಿಂಗೆ ಎಲ್ಲವೂ ಮೇಲಿಂದ-ಮೇಲೆ ಬಂದ್‌ಕಂಡ್ ಇದ್ದೇ ಇದ್ದವೆ. ಹಂಗಾಗಿ, ಸುಮಾರ್ 100ಕ್ಕೆ 70ರಷ್ಟ್ ರೋಗಗಳ್ಗೆ ಇವೇ ಕಾರಣಂತ ಗೊತ್ತಾಗುಟು. ಇಂದ್‌ನ ಜನರ್ಲಿ ರಕ್ತದ ಒತ್ತಡ, ಹೃದಯ ರೋಗ, ನರಗಳ ದೌರ್ಬಲ್ಯ, ಸಕ್ಕರೆ ರೋಗ (ಮಧುಮೇಹ) ಕುಡಿತದ ಚಟ, ಡ್ರಗ್ಸ್‌ಗಳ ಸೇವನೆ, ಹಿಂಗೆ ಹತ್ತಾರ್ ರೋಗಗಳಿಗೆಲ್ಲಾ ಇಂದ್ ಜನರ್ಲಿ ಇರ್‍ವ ಒತ್ತಡನೇ ಕಾರಣ ಅಂತ ಖಂಡಿತ ಹೇಳ್ದ್ ಒಂದು ಅಲ್ಲ, ವೈಜ್ಞಾನಿಕ ಸಂಶೋಧನೆಗಳ್‌ಂದ ಕೂಡ ಕಂಡ್ ಬಂದುಟು.

ಈ ರೋಗಗಳ್ನೆಲ್ಲಾ ಹೆಚ್ಚ್‌ನ ಮಟ್ಟಿಗೆ ಒದ್ದೋಡ್ಸ್‌ಕುಂತ ಆದ್ರೆ ಒಂದೇ ಒಂದ್ ಮದ್ದ್ ಅಂದ್ರೆ "ಗಹಗಹಿಸುವ ನಗೆ". ಈ ಜಗತ್ತ್‌ಲಿ ನಗುವಂಗೆ ಸ್ವರ್ಗ, ಅಳುವಂಗೆ ನರ್ಕ ಅಂತೂ ಗಟ್ಟಿ.

ನಗೆಗಳ್‌ಲಿ 2 ಬಗೆ : ಒಂದ್ ಸ್ವಾಭಾವಿಕ ನಗೆ, ಮತ್ತೊಂದ್ ಕೃತಕ ನಗೆ. ಈ ಎರಡೂ ನಗೆಗ ಆರೋಗ್ಯಕ್ಕೆ ಒಂದೇ ಮಟ್ಟದ ಪರಿಣಾಮ ಕೊಟ್ಟವೇ ಅಲ್ಲ ಇಲ್ಲನೋಂತ ಇನ್ನೂ ಸರಿಯಾಗಿ ಗೊತ್ತಾತ್ಲೆ. ಇನ್ನೂ ಚರ್ಚೆ ಸಂಶೋಧನೆ ನಡ್‌ಸ್ತಾ ಒಳೊ. ಇವೆರಡೂ ಹೆಚ್ಚ್-ಕಡಿಮೆ ಒಂದೇ ತರದ ಪರಿಣಾಮ ಬೀರಿದೆಂತ ನನ್ನ ಸ್ವಂತ ಅಭಿಪ್ರಾಯ ಆಗುಟ್ಟು. ಯಾಕೆಂದರೆ ನಾನ್ ಸುಮಾರ್ 25 ವರ್ಷಗಳ್‌ಂದ ಈಚೆಗೆ ಬೆಂಗಳೂರು ಆರ್.ಟಿ. ನಗರದ ಠಾಗೋರ್ ನಗೆಕೂಟದ ಸದಸ್ಯ ಅಲ್ಲದೆ ಅದರ 'ಯಾಂಕರ್' ಆಗಿ ನಡ್‌ಸ್ತಾ ಒಳೆ. ಏನಿದ್ದರೂ ಹೊಟ್ಟೆ ಒಳಗಿಂದ ಒಮ್ಮೆಗೇ ಹೊರಬಂದ ಸ್ವಾಭಾವಿಕ ನಗುಗೂ ನಗೆ ಆಡಕು ಅಂತ ಮನಸ್ಸ್‌ಲಿ ಮಾಡಿಕಂಡ್ ನೆಗಾಡ್ದಕ್ಕೂ ಏನಿಲ್ಲಂದರೂ ಸ್ವಲ್ಪ ವ್ಯತ್ಯಾಸದ ಪರಿಣಾಮ ಇದ್ದೇ ಇದ್ದದೆ. ಹಂಗಾಗಿ ಎಲ್ಲವೂ ಸ್ವಾಭಾವಿಕ ನಗೆ ಕಡೆ ಹೆಚ್ಚಿನ ಗಮನ ಕೊಡೋಕು. ಹಂಗಾದರೆ ಹೆಂಗೆಪ್ಪ ಸ್ವಾಭಾವಿಕ ನಗೆ ಆಡ್ಕೊಂತ ದಾರಿ ಕಾಣದ ವಿಷಯ ಆಗುಟ್ಟು. ಅದಕ್ಕನೇ ಪ್ರತೀ 1 ನಗೆ ಕೂಟಲಿ ಸ್ವಾಭಾವಿಕ ನಗುನ ಬರ್ಸಿಕೆ ಒಬ್ಬ ನಗೆ ಪ್ರವೀಣ ಇದ್ದದೆ. ಅಂವ ಎಂತವ ಆಗಿರಕ್ಕು ಅಂದರೆ ತಾನ್ ನೆಗಾಡ್ದು ಅಲ್ಲದೆ ಬೇರೆವರಲ್ಲಿ ಸ್ವಭಾವಿಕ ನಗೆನ ಚಿಮ್ಮಿಸುವ ಚಾತುರ್ಯ ಅವನಲ್ಲಿ ಇರಕು. ಅಂವ ಬೇರೆವರನ್ನ ಒಂದಲ್ಲ ಒಂದು ಜೋಕ್ ಹೇಳಿಕಂಡ್ ನೆಗಾಡಿಸಿಕಂಡ್ ಇದ್ದದೆ. ಆಗ ಬೇರೆವೆಕ್ಕೆಲ್ಲಾ ನಗೆ ಊಟ. ತನ್ನ ಸುತ್ತ-ಮುತ್ತಲಿನವರ್ನ ನಗೆಕಡಲಲ್ಲಿ ಮುಳ್ಗ್‌ಸ್‌ವವನೇ ನಗೆ ತಜ್ಞ.

2. ನಗೆ ಕೂಟಗಲ್ಲಿ ಭಾಗವಹಿಸಿದರೆ ಅನೇಕಾನೇಕ ಲಾಭ ಉಟ್ಟು. ಹಂಗಾಗಿ ಯಾರೂ ಎಂದಿಗೂ ಇದೊಂದು ಮನೋರಂಜನೆ ಕಾರ್ಯಕ್ರಮ ಮಾತ್ರ ಅಂತ ತಿಳಿದ್‌ಕೊಂಬಾಡಿ. ಇಲ್ಲಿ ಆದೆ ಹೊಸ ಹೊಸ ಪರಿಚಯ, ಹೊಸ-ಹೊಸ ಮಕಗಳ ಭೇಟಿ, ಹೊಸ-ಹೊಸ ಭಾವನೆಗಳ ಜನನ, ಹೊಸ-ಹೊಸ ನಡುವಳಿಕೆಗಳ ಅರಿವು. ಹಿಂಗೆ ಎಲ್ಲವೂ ಹೊಸದು. ಇಲ್ಲಿ ಆತ್ಮೀಯತೆ, ಜನಸಂಪರ್ಕ, ವಿಚಾರಗಳ ವಿನಿಮಯ, ಹೊಸ-ಹೊಸ ಮಾಹಿತಿ, ಹಂಗೆ ಎಲ್ಲಾ ಒಂದೇ ಕಡೆ ನಿಮ್ಗೆ ಸಿಕ್ಕಿದೆ. ಇದೆಲ್ಲಾ ಒಬ್ಬಂಗೆ ಒಂದೇ ಕಡೆ ಸಿಕ್ಕಿಬುಟ್ಟರೆ ಅವನೊಬ್ಬ ಸುಲಭಲಿ ಪರಿಪೂರ್ಣ ವ್ಯಕ್ತಿ ಆಗಿಬುಟ್ಟದೆ.

**3. ನಗೆ ಕೂಟಗಲ್ಲಿ ನಡ್ಕಂಡ್ ಬಾವ ಮುಖ್ಯ ಕಾರ್ಯಕ್ರಮಗ :** ನಾನ್ ಮೊದ್ಲೇ ಹೇಳ್‌ದಾಂಗೆ ಪ್ರತೀ 1 ನಗೆ ಕೂಟಲಿ 1 ಗಂಟೆಗೆ ಮೀರಿ ಕಾರ್ಯಕ್ರಮಗ ಇದ್ದದೆ. ಇವ್‌ಗಲ್ಲಿ ಮುಖ್ಯವಾಗಿ ಸರಿಯಾದ ಉಸಿರಾಟ ಕ್ರಮ ಅಭ್ಯಾಸ (ಪ್ರಾಣಾಯಾಮ) ಯಾವ ಕಾರ್ಯಕ್ರಮ ಆದರೂ, ಅಂದರೆ ದೀರ್ಘ ಉಸಿರಾಟ

ಸರಿಯಾದ ರೀತಿಲಿ ಮಾಡೋಕು. ಇದ್ ಬಹಳ ಮುಖ್ಯ. "ಪ್ರಾಣಾಯಾಮ" ಇದರ ಉಪಯೋಗ ಎಲ್ಲವೂ ಸ್ವಲ್ಪನಾದರೂ ತಿಳ್‌ಕಂಡ್ ಇಂದ್ ಎಲ್ಲವೂ ಅಲ್ಲಿ–ಇಲ್ಲಿ ಮಾಡ್‌ತಾ ಒಳೊ. ನಗೆಯೋಗಂದ ಒಬ್ಬನ ಆರೋಗ್ಯಕ್ಕೆ ಆಗುತ್ತಿರುವ ಲಾಭ ಅನೇಕಾನೇಕ. ಅವ್‌ಗಳ್‌ನ ಎಷ್ಟ್ ಹೇಳಿರೂ ಮುಗಿಯಕಿಲ್ಲೆ.

"ಒಬ್ಬ ವ್ಯಕ್ತಿ ಬಯಸುದು ಜೀವನಲ್ಲಿ ಆದಷ್ಟ್ ಮಟ್ಟಿಗೆ ಆನಂದದ ಜೀವನ. ಆನಂದದ ದೀರ್ಘಾಯಸ್ಸ್. ಆನಂದಂದ ಶಿವನ ಕಾಣ್‌ದು. ಯಾಕೆಂದರೆ ಶಿವನ ರೂಪನೇ ಆನಂದ ಅಲ್ಲವೋ? ಅಂತಹ ಆನಂದಮಯ ಜೀವನ ಪಡೆಯಕ್ಕೆ ನಗು ಅತೀ ಮುಖ್ಯಂತ ಹೇಳ್‌ವೆ. ಅದಕ್ಕೊಂದು ನುಡಿ ಹಿಂಗುಟ್ಟು.

"ನೂರ್ ಮೀರಿ ಬದುಕಲು, ಕೇಳ್ ಇದೇ ನಮ್ಮ ಗುಟ್ಟು॥
ತಿನ್ನು ನೀನು ಅರ್ಧ ಹೊಟ್ಟೆ, ನೀರ್ ಕುಡಿ ಅದರ ಎರಡರಷ್ಟ್॥
ಮೂರು ಪಟ್ಟು ಬೆವರು ಸುರಿಸಿ ನಗಬೇಕು ನಾಲ್ಕರಷ್ಟ್॥
ದೀರ್ಘವಾಗಿ ಬಾಳಿ ಬದುಕಿ, ಸವಿಯಕು ಆ ಶಿವನ ಸೃಷ್ಟಿ॥

ಡಾ॥ ಜೋಕಿಮ್ ಗಾರ್ಡ್‌ಮನ್ ಹ್ಯಾಂಬರ್ಗ್, ಜರ್ಮನಿ ಇವು ಹೇಳಿವೆ
"ನಗೆಯಿರಿ! ಬಹಳಷ್ಟ್ ನಗೆಯಿರಿ॥ ಮನಪೂರ್ವಕ ನಗೆಯಿರಿ॥"
ನಿಮ್ಮ ರೋಗಗಳೆಲ್ಲಾ ಓಡಿ ಹೋದವೆ. ನೀವ್ ದೀರ್ಘಾಯುಷಿಗಳಾಗುವಿರಿ.
ನಕ್ಕು ನಲಿದಾಡಿರಿ ಎಂಬದನ್ನ ಮಾತ್ರ ನಾವ್ ನಿಜವಾಗಿ ಪ್ರೋತ್ಸಾಹಿಸಕು.
ಇವೆಲ್ಲಾ ಮನುಷ್ಯನ ಆರೋಗ್ಯ ವರ್ಧನ್ನೆನ ಒಂದು ಸಂಪನ್ಮೂಲ.

ಇನ್ನೊಬ್ಬ ಹಾಸ್ಯ ಪ್ರವೀಣ–ಶ್ರೀಮಾನ್ ವೈ. ಎಮ್. ಎನ್. ಮೂರ್ತಿ ಹೇಳ್‌ವೆ – ನಗು ಇಲ್ಲದೆ ನಮ್ಮ ಜನ್ಮ ಅಪರಿಪೂರ್ಣ. ನಗು ಇಲ್ಲದ ಜನ ಆರೋಗ್ಯ ಹೀನರಾಗಿರುತ್ತಾರೆಂತ ಹೇಳ್‌ದ್‌ರಲ್ಲಿ ಸಂಶಯವೇ ಇಲ್ಲೆ. ಇದನ್ನ ಎಲ್ಲ ಜನ ನೆನಪ್‌ಲಿ ಇಡೋಕು. "ಕೋಪ ದೂರ ಮಾಡೋಕು. ಅದಕ್ಕೆ ಅವು 1 ನುಡಿ ಹೇಳ್ವೆ – ಕೋಪ ನಂದಿದ ದೀಪವಾಗಿದ್ದು, ನಗು ನಂದಾದೀಪವಾಗಿರಲಿ" ಅಂತ. ಎಂಥ ಸಲಹೆ ನೋಡಿ.

ಇನ್ನೊಬ್ಬ ಹೇಳ್ವೆ – (ಡಾ॥ ವಿಲಿಯಮ್ ಪ್ರಾರ್ಯ್, ಸ್ಟಾನ್‌ಪೋರ್ಡ್ ಯೂನಿವರ್ಸಿಟಿ, ಅಮೇರಿಕ) "ನಗುವು ಮತ್ತೆ ನಗ್ಸ್‌ವ ಕ್ರಿಯೆಗ ಹಲವಾರ್ ಘಾತಕ ರೋಗಗಳನ್ನ ಕೂಡ ದೂರ ಮಾಡಿವೆ. ಮಾನಸಿಕ ಒತ್ತಡ ಸಹ ಕಮ್ಮಿ ಆದೆ." ನಾನ್ ಮುಂದೇ ಹೇಳ್‌ದಂಗೆ ಮನಸ್ಸಿನ ಒತ್ತಡ ಬಹಳ ಕೆಟ್ಟದ್. ಆದರ್‌ಂದ ಎಲ್ಲಾ ರೋಗಗ ಹುಟ್ಟಿಕಂಡವೆಂತ. ನಕ್ಕರೆ, ಶರೀರದ ಬಹುತೇಕ

ಎಲ್ಲಾ ಸ್ನಾಯುಗ ವಿಕಾಸಿತ ಆದವೆ. ಸಡಿಲ ಆದವೆ. ಇದರ್‌ಂದ, ನಿಮ್ಮ ಕೀಲ್ ಬೇನೆ, ಉಳುಕ್, ಸ್ನಾಯು ಸೆಳೆತ, ತಲೆಶೂಲೆ, ಮುಂತಾದವುಗಳೆಲ್ಲಾ ವಾಸಿಯಾದೆ.

ಈ ರೀತಿ ಪ್ರಪಂಚದ ಅನೇಕ ನಗೆ ತಜ್ಞರ್ ಅವರವರ ಸಂಶೋಧನೆ, ಅನುಭವ, ಅಭಿಪ್ರಾಯಗಳ್ನ ಬರ್‍ದೊಳೊ. ಅಂಥದ್ ಬೇಕಾದಷ್ಟ್ ಉಟ್ಟೇ ಉಟ್ಟ್.

ಒಟ್ಟಾರೆ ಹೇಳಕುಂತೇಳ್ರೆ – ನಗೆಕೂಟ ನೀವಿರ್‌ವಲ್ಲಿ ಇದ್ದರೆ ಅದಕ್ಕೆ ಸೇರಿಕಣಿ. ಅಲ್ಲಿ ಹೇಳ್ದಂಗೆ ಎಲ್ಲಾ ಮಾಹಿತಿ ಸಿಕ್ಕಿ ನಿಮ್ಗೆ ಅನೇಕ ರೀತಿಲಿ ಉಪಯೋಗ ಆದರ್ಲಿ ಸಂಶಯವೇ ಇಲ್ಲೆ. ಅಲ್ಲಿ, ಇಲ್ಲೆಂತ ಆದ್ರೆ ನಿಮ್ಮ ಮನಸ್ಸ್‌ಲಿ ಒಂದು ತೀರ್ಮಾನ ಮಾಡಿಕನಿ. ಏನಂದ್ರೆ 1 ದಿನಲಿ ಏನೂ ಇಲ್ಲಂದ್ರೆ ಅಲ್ಲಿ–ಇಲ್ಲಿ ಸೇರಿ ಹೆಂಗಾದರ್ ಮಾಡಿ 1 ಗಂಟೆ ಆದರೂ ನೆಗಾಡಿಕಂಡ್, ನೆಗಾಡ್ಸಿಕಂಡ್ ಕಾಲ ಕಳ್ಕಂಡ್ ಎಲ್ಲಾ ಕಷ್ಟಗಳನ್ನ ಮರ್‍ತ್ ಇದ್ದರೆ ಇದರ್‌ಂದ ನಿಮ್ಗೆ ಒಳ್ಳ ಆರೋಗ್ಯ ಭಾಗ್ಯ ಉಟ್ಟೇ ಉಟ್ಟು. ಹಿಂಗೆ ಮಾಡ್ರೆ ನಿಮ್ಮ ಮನಸ್ಸ್‌ನ ಒತ್ತಡ ಕಮ್ಮಿಯಾದೆ, ರಕ್ತ ಚಲನೆ ಶರೀರಲಿ ಹೆಚ್ಚಾದೆ, ಮನಸ್ಸ್‌ಲಿ ಉಲ್ಲಾಸ ಹೆಚ್ಚಾದೆ, ಹೃದಯ ರೋಗ, ಸಕ್ಕರೆ ರೋಗ, ರಕ್ತದ ಒತ್ತಡ, ಕುತ್ತಿಗೆ ಬೇನೆ, ಬೆನ್ನ್ ಮತ್ತೆ ಸೊಂಟ ಬೇನೆ, ಮಂಡಿ ಬೇನೆ ಹಿಂಗೆ ಅನೇಕ ಬೇನೆಗಳೆಲ್ಲಾ ಓಡಿಹೋದವೆ. ನಕ್ಕರೆ ನಿಮ್ಮ ರೋಗ ನಿರೋಧಕ ಶಕ್ತಿ ಹೆಚ್ಚಾಗಿ ಭಾರೀ ಅಪಾಯಕಾರಿ ರೋಗಂತೇಳ್ವ ಕ್ಯಾನ್ಸರ್, ಏಡ್ಸ್ ಕೂಡ ದೂರ ದೂರ ಹೋದೆಂತ ತಿಳ್‌ದುಟ್ಟು. ನೀವ್ ಸದಾ ಆದಷ್ಟ್ ನೆಗಾಡ್‌ತ್ತಾ ಇದ್ದರೆ, ನಿಮ್ಮ ಮುಖದ ಸ್ನಾಯುಗ ವ್ಯಾಯಾಮ ಆದಂಗೆ ಆಗಿ ಮುಖದ ಕಾಂತಿ ಕೂಡ ಹೆಚ್ಚಾದೆ. ನಗು ಎಲ್ಲಾ ರೋಗಗಳ ರಾಮಬಾಣಂತ ಹೇಳಿಕೊಂಡರೂ ಯಾವ ಕಾರ್ಯಕ್ರಮ (ವಿವಿಧ ರೀತಿಯ ನಗೆಕೂಟದ ಕಾರ್ಯಕ್ರಮಗ) ಅತೀ ಆಕೆ ಬತ್ತ್. ಹಂಗಾದರೆ, ಕೆಲವ್ ಸಂದರ್ಭಗಳಲ್ಲಿ (ಆರೋಗ್ಯ ಸ್ಥಿತಿಗಳ್ಲಿ) ಸ್ವಲ್ಪ ತೊಂದರೆ ಆದು. ಉದಾಹರಣೆಗೆ–ನಿಮ್ಗೆ ಹರ್ನಿಯ ಆಪರೇಷನ್ ಆಗಿದ್ದರೆ, ಕಠಿಣ ತರದ ಹೃದಯ ಆಪರೇಶನ್ ಆಗಿದ್ದರೆ ನೀವ್ ನಗೆಕೂಟಕ್ಕೆ ಸೇರಿಕಂಬಕ್ಕೆ ಮೊದ್ಲೇ ಡಾಕ್ಟರ್‌ಗಳ ಅಭಿಪ್ರಾಯ ಕೇಳಿಕಂಡ್ ಸೇರಕು. ಏಕಂದ್ರೆ 1 ಗಂಟೆ ಸುಮಾರ್ 45 ತರದ ವಿವಿಧ ಕಾರ್ಯಕ್ರಮಗ ನಡ್ದದೆ. ಇದರ್ಲಿ ನಿಮ್ಮ ಆರೋಗ್ಯ ಸ್ಥಿತಿನ ಆಧಾರ್‍ದ ಮೇಲೆ ಕೆಲವೊಂದು ಸರಿ ಹೋಗದಿರ್‍ದು.

**ಕಡೇಂದ ನಿಮ್ಗೆ ಹೇಳ್ವದ್ ಏನಂದ್ರೆ ಎಲ್ಲಾ ಕಡೆ ಈಗ ನಗೆಕೂಟಗ ಮೂಲೆ ಮೂಲೆಲಿ ಒಳೊ. ಇದ್ದರೆ ಸೇರಿಕಣಿ. ಅದಕ್ಕೆ ಯಾವ ವಯಸ್ಸೂ ನಿಬಂಧನೆ, ಖರ್ಚೂ ಇಲ್ಲೆ. ಎಲ್ಲಾ ಪುಕ್ಸಟೆ. ನಿಮ್ಗೆ ನನ್ನ ಹಂಗೆ 91 ವರ್ಷ ಆದರೂ ಸೇರ್‍ಕಣಿ. 1 ಗಂಟೆಯಾದರೂ ಒಂದಿಷ್ಟ್ ಗಹಗಹಿಸಿ ಮನಸ್ಸಾರೆ ಎಲ್ಲಾ ಕಷ್ಟ, ತೊಂದರೆಗಳ್ನೆಲ್ಲಾ ಮರ್‍ತ್ ನೆಗಾಡಿಬಿಡಿ. ಇದರಂದ ನಿಮ್ಮ**

ಮನಸ್ಸಿಗೆ ಆನಂದ, ಉಲ್ಲಾಸ ಸಿಕ್ಕಿದೆ. ದಿನ ಇಡೀ ನೀವ್ ಒಂದ್ ತರದ ಕುಸೀಲಿ ಇರ್‍ದು ಮಾತ್ರ ಖಂಡಿತ. ಮರಿಬೇಡಿ, ನಾನ್ ಮೊದಲೇ ನಿಮಗೆ ಹೇಳಿದ್ದೆ ನೋಡಿ ಏನಂದ್ರೆ, ಪ್ರತೀಯೊಂದ್ ನಗೆಕೂಟಲಿ ಒಬ್ಬ ನೆಗಾಡ್ಸ್‌ಂವ ಬೇಕೂಂತ. ಅದ್ಕೆ ನಿಮ್ಮನ್ನ ನೆಗಾಡ್ಸ್‌ಕೆ ಇಲ್ಲೊಂದ್ ಕವಿತೆ ಬರ್‍ದೊಳೆ. ಇದನ್ನ ಓದಿ ನಿಮ್ಗೆ ನಗು ಬಂದ್ರೆ ನಕ್ಕುಬಿಡ್ರಿ, ಅಳು ಬಂದ್ರೆ ಅತ್ತ್ ಬುಡಿ, ಸಿಟ್ಟು ಬಂದ್ರೆ ಹಿಟ್ಟು ತಿಂದ್ ಬಿಡಿ ಆತಾ?

ಕವನ :

## ಓ ನನ್ನ ಕಾಲೇಜು ಕನ್ಯೆ

ಓ ನನ್ನ ಕಾಲೇಜು ಕನ್ಯೆ,
ನೀನ್ಯಾಕೆ ಕಂಡತ್‌ಲೆ ನಿನ್ನೆ ಮೊನ್ನೆ
ನೀ ಮೊನ್ನೆ ಬೀರ್‌ದ ನಸುನಗೆಂದ
ಓಡ್ತ್ ನನ್ಮನಸ್ ನಿನ್ನ ಕಡೆ ಸಂತೋಷಂದ॥
ದಿನ-ದಿನವೂ ನೋಡುತ್ತಾ-ನೋಡುತ್ತಾ ನಿನ್ನ ಕೆಂಪು ಕೆನ್ನೆಗಳನ್ನ
ದಿನ-ದಿನವೂ ನೋಡುತ್ತಾ-ನೋಡುತ್ತಾ ನಿನ್ನ ಕೆಂಪು ತುಟಿಗಳನ್ನ
ನಾ ಪರೀಕ್ಷೆಯಲ್ಲಿ ತಕಂಡೆ ಸೊನ್ನೆ-ಸೊನ್ನೆ
ನಾ ನಿನ್ನ ಪ್ರೀತಿಸಿರುವುದು ಗೊತ್ತಾಗಿ, ನಿನ್ನಪ್ಪ ಸಿಟ್ಟಾಗಿ
ಬಾರ್ಸಿದೊ ನನ್ನ ಕೆನ್ನೆಗೆ ಬಾಸುಂಡಿ ದಪ್ಪ ಬರುವಂಗೆ
ಆದರೂ ಮಾಡಿನೆ ದಿನ-ದಿನ ನಾ ನಿನ್ನ ಸ್ತುತಿ
ನೀ ನನ್ನ ಕೈ ಬಿಟ್ಟರೆ ಆದು ನನ್ನ ತಿಥಿ॥
ನೀ ಅಂದ್ ಬೀರಿದ ನಸುನಗೆ
ಇಂದ್ ಕಾಣ್ಸಿಟು ನಂಗೆ ಹುಚ್ಚಾಸ್ಪತ್ರೆಯ ಗತಿ
ನನ್ನ ಮುಂದೆನ ಜೀವನ ಅದೋಗತಿ॥

✍ ಡಾ॥ ಕಾವೇರಿಮನೆ ಬೋಜಪ್ಪ

ಶ್ರೀಯುತ ಕಾವೇರಿ ಮನೆ ಬೋಜಪ್ಪನವು ಕೊಡಗ್‌ನವು. ಬೆಂಗಳೂರ್‌ನ ಕೃಷಿ ವಿಶ್ವವಿದ್ಯಾಲಯ, ಜಿ.ಕೆ.ವಿ.ಕೆಲಿ ತೋಟಗಾರಿಕೆ ವಿಭಾಗದ ಮುಖ್ಯಸ್ಥರಾಗಿದ್ದೊ, ಈಗ ನಿವೃತ್ತರಾಗೊಳೊ. ಶ್ರೀಯುತರ್ ಆರ್.ಟಿ. ನಗರ ಬೆಂಗಳೂರ್ ಇಲ್ಲಿ ವಾಸ ಮಾಡ್ತೊಳೊ.

# ಅಮ್ಮನ ಬೆಲೆ



"ವಸುದೈವ ಕುಟುಂಬಕಮ್ ಸರ್ವೇ ಜನ ಸುಖಿನೋಭವಂತು" ಎಂಬ ಸ್ತುತಿನ ಸ್ತುತಿಸಿ ನನ್ನ ಒಂದೆರಡು ಅನುಭವನ ಹೇಳಿನೆ. ಮನುಷ್ಯ ಸಮಾಜ ಜೀವಿ, ಮಾನವ ಸಂಘ ಜೀವಿ. ನಮ್ಮ ಜೀವನಲಿ ಅಪ್ಪ, ಅಮ್ಮನವು ಮೊದಲ ದೇವ್ರು. ಅಪ್ಪ, ಅಮ್ಮನವು ನಮ್ಮ ಜೀವನಲಿ ಮಹತ್ವವಾದವು. ಅವರಿಬ್ಬರ ಪ್ರೀತಿ ಅಮರ. ಅಮ್ಮನೆ ನಮಗೆ ಮೊದ್‌ಲಿನ ದೇವ್ರು ನಮ್ಮೆಲ್ಲ ಏಳಿಗಾಗಿ ಅಪ್ಪ, ಅಮ್ಮ ಹಗಲಿರುಳು ದುಡಿದವೆ. ನಮ್ಮ ಒಳಿತನ್‌ನೇ ಅವು ನೆನ್‌ಸುದು. ಅವು ನಮ್ಮ ಕಣ್ಣಿಗೆ ಕಾಣುವ ದೇವ್ರು. ಅಪ್ಪ ಅಮ್ಮ ನಮ್ಮ ಒಟ್ಟಿಗೆ ಇರ್‌ಕಾಕನ ನಮ್‌ಗೆ ಅದರ ಬೆಲೆ ಗೊತ್ತಾದುಲೆ. ಅವು ನಮ್‌ಗೆ ಬುದ್ಧಿವಾದ ಹೇಳ್ರೆ ಇವು ಎಂತ್‌ನೊ ಹೇಳ್ದ್‌ತ ನೆನಿಸ್‌ಕಂಡ್ ನಾವ್ ಸುಮ್ಮನೆ ಇದ್ದವೆ.

ಯಾವುದೇ ವಸ್ತು ಆಗಲಿ, ವ್ಯಕ್ತಿ ಆಗಲಿ ನಮ್ಮೊಳಗೆ ಇರ್‌ಕಾಕನ ಅದರ ಬೆಲೆನೆ ಗೊತ್ತಾದುಲೆ. ಅದು ಬುಟ್ರೆ ಅವು ನಮ್ಮ ಒಟ್ಟಿಗೆ ಇಲ್ಲೆಂತ ಹೇಳ್‌ಕಾಕನ ಅದರ ಬೆಲೆ ಗೊತ್ತಾದು.

ಒಂದು ದಿನ ನನ್ನ ಅಮ್ಮಂಗೆ ಉಷಾರ್ ಇಲ್ಲದೆ ಆತ್. ಆಗ ಅಪ್ಪ ಅಮ್ಮನ ಅವ್ವನ ಮನೆಗೆ ಕಳ್‌ಸಿದೊ. ಅಮ್ಮನ ಅವ್ವನ ಮನೆಗೆ ಕಳ್‌ಸಿಕಾಕನ ನಂಗೆ ಏನು ಅನಿಸಿತ್ಲೆ. ಅದೇ ಅಮ್ಮ ಹೋದ ಮೇಲೆ ನಂಗೆ ತುಂಬಾ ಬೇಜಾರ್ ಆತ್. ಮತ್ತೆ ಮನೇಲಿದ್ದ ಕೆಲಸನ ಯಾವುದೆಲ್ಲಾ ಮಾಡೋಕ್‌ಂತ ಗೊತ್ತಾತ್‌ಲೆ. ಯಾಗೋಳು

ಅಮ್ಮ ಮನೆಲಿದ್ದ್ ಅಭ್ಯಾಸ. ಹಂಗೆ ಅಮ್ಮ ಇಲ್ಲದೆ ಬೇಜಾರ್. ಅಮ್ಮನಂಗೆ ಅಪ್ಪ ಇರ್ದುಲೆ. ಅಮ್ಮನಂಗೆ ಅಪ್ಪ ಸಲೀಸಾಗಿ ಇರ್ದುಲೆ ಅಲಾ? ಮನೇಲಿ ತುಂಬಾ ಕೆಲಸ ಇತ್ತ್. ಅದು ಬೇರೆ ಅಪ್ಪನೂ ಬೇರೆ ಮನೆ ಕೆಲಸಕ್ಕೆ ಹೋಗವು. ನಾ ಒಬ್ಬನೇ ಮನೆಲಿ. ತಮ್ಮ ಆಚೆ ಮನೆ–ಈಚೆ ಮನೆ ಹೋಕೆ ಆತ್. ಅಂತೂ ಅಮ್ಮ ಎಂತ ಎಂತ ಕೆಲಸ ಮಾಡ್ದುತ ಆಗಾಗ ನೆನಪು ಮಾಡಿಕಂಡ್ ನೆನಪ್ ಮಾಡಿಕಂಡ್ ಕೆಲಸ ಮಾಡ್‌ದೆ. ದೇವ್ರೆ... ಎಷ್ಟು ಕೆಲಸ ಇತ್ತ್‌ತ ಹೇಳ್ರೆ ಅದು ಬೇರೆ ದನಗಳೂ ಇದ್ದೊ. ಅವರ ಚಾಕರಿ ಬೇರೆ! ಯಪ್ಪಾ... ಬೆಳ್ಗೆಂದ ಎದ್ದ ಮೇಲೆಂದ ಹಿಡ್ದು ಹಿಂಬತ್ತು ರಾತ್ರಿ ಮಲಗುವ ತನಕ ಪುಲ್ ಕೆಲಸನೆ.

ಅದೇ ಅಮ್ಮಂಗೆ ಇನ್ನೂ ಬೇಕಸ್ಟ್ ಕೆಲಸ ಇದ್ದದೆ. ಅದು ನಮ್ಮ ಚಾಕರಿ ಮಾಡುವ ಕೆಲಸ. ನಾವು ಶಾಲೆ ಬುಟ್ಟು ಬಂದ್ ಎತ್ತಿದಂಗೆ ನಮಗೆ ಎಂತಾರ್ ತಿಂಡಿ ಕೊಡೊಕೆ. ದೇವ್ರೆ ಎಷ್ಟ್ ಕೆಲಸ. ನಂಗೆ ಅಷ್ಟ್ ಕೆಲಸ ಮಾಡಿ ಸಾಕಾತು. ಆ ದಿನನೆ ನಾ ಕಷ್ಟ ಪಡ್‌ಕಾಕನನೆ ನಂಗೆ ಅಮ್ಮನ 'ಬೆಲೆ' ಗೊತ್ತಾದ್. ಅಂದು ಆ ದಿನ ನಾ ಅನುಭವ ಪಡ್‌ಕಾಕನನೆ ನಂಗೆ ಅಮ್ಮನ ಬೆಲೆ, ಕಷ್ಟ ಅರಿವಾದ್.

ಪಾಪ ಅಪ್ಪ ಅಮ್ಮ ಪುರುಸೊತ್ತು ಇಲ್ದೆ ಹೊಟ್ಟೆ ಕಟ್ಟಿಯಾರ್ ಕೆಲಸ ಮಾಡ್ವೆ, ಅಪ್ಪ, ಅಮ್ಮ ಆಗಲಿ ನಮ್ಮ ಖುಷಿಗೋಸ್ಕರ ಏನ್ ಮಾಡಿಕಾರು ತಯಾರಾಗಿದ್ದವೆ ಅಲಾ! ನಮ್ಮ ಸಂತೋಷಕ್ಕೆ ಏನು ಮಾಡಿಕೂ ಅಮ್ಮ ಸಿದ್ಧ. ಅಮ್ಮಾ, ನಿನ್ನ ಈ ಋಣನ ಈ ಜನ್ಮಲಿ ತೀರ್‌ಸಿಕ್ಕೆ ಅಸಾಧ್ಯ ಅಮ್ಮಾ! ಅಮ್ಮನೆ ಮೊದಲ ದೇವ್ರು, ಅಪ್ಪ, ಅಮ್ಮನೆ ನಮ್ಮ ಕಾಯುವ ದೇವ್ರೂ...

✍ ಪ್ರಜ್ಞಾ ವಿ.ಪಿ.

# ಅರೆಬಾಸೆಲಿ ಬರ್ದ ಕತೆ ಪುಸ್ತಕಗಳ ಅವಲೋಕನ

ಅರೆಬಾಸೆ ಸಾಹಿತ್ಯ ಇತ್ತೀಚಿನ ವರ್ಸಗಳ್‌ಲಿ ವೇಗದ ಬೆಳವಣಿಗೆ ಕಾಣ್ತಾ ಉಟ್ಟು.ಇದ್ಕೆ ಮುಖ್ಯ ಕಾರಣ ಮೇ 2012ರ್ಲಿ ರಚನೆ ಆದ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ. ಕತೆ ಪುಸ್ತಕ, ಪೊದ್ಯ ಪುಸ್ತಕ, ಕಾದಂಬರಿ, ನಾಟಕ, ನೆನ್ಪುನ ಪುಸ್ತಕಗ, ವೈಚಾರಿಕ ಲೇಖನಗ, ಅನುಭವ ಕತೆಗ, ಆತ್ಮಚರಿತ್ರೆಗ, ಸಂಸ್ಕೃತಿಗೆ ಸಂಬಂಧಿಸಿದ ಪುಸ್ತಕಗ, ಸಂಶೋಧನಾ ಗ್ರಂಥಗ, ಮಹಾ ಪ್ರಬಂಧಗ, ಹಿಂಗೆ ಸಾಹಿತ್ಯದ ಬೇರೆ ಬೇರೆ ಪ್ರಕಾರಗ ಅರೆಬಾಸೆಲಿ ಪ್ರಕಟ ಆದ್ ಒಳ್ಳೆ ವಿಚಾರವೇ. ಆದರೆ ಅರೆಬಾಸೆ ಸಾಹಿತ್ಯ ಓದಗರಿಗೆ ಅರೆಬಾಸೆ ಸಾಹಿತ್ಯ ಲೋಕದ ಬಗ್ಗೆ ಸಮಗ್ರ ಮಾಹಿತಿ ಇಲ್ಲೆ. ನನ್ನ ಈ ಲೇಖನದ ಮುಖ್ಯ ಉದ್ದೇಶ ಇಷ್ಟರ ವರೆಗೆ ಅರೆಬಾಸೆಲಿ ಪ್ರಕಟ ಆದ ಕತೆ ಪುಸ್ತಕಗಳ ನಮ್ಮ ಓದ್‌ಗ್‌ರಿಗೆ ಪರಿಚಯ ಮಾಡಿ ಕೊಡ್ದು. ಇಷ್ಟರವರೆಗೆ ಅಂದರೆ ಮಾರ್ಚ್ 2020ರ ವರೆಗೆ ಅರೆಬಾಸೆಲಿ ಒಟ್ಟು ಹದಿಮೂರು ಕತೆ ಪುಸ್ತಕಗ ಬುಡುಗಡೆ ಆಗೊಳೊ. ಅರೆಬಾಸೆ ಕತೆಗಳ ಬಗ್ಗೆ ಸುರೂಗೆ ಅಧ್ಯಯನ ಮಾಡ್ದೊವು 1994ರ್ಲಿ ಡಾ. ವಿಶ್ವನಾಥ ಬದಿಕಾನ. ಆದರೆ ಅರೆಬಾಸೆಲಿ ಸುರೂಗೆ ಕತೆ ಪುಸ್ತಕ ಪ್ರಕಟ ಮಾಡ್ದೊವು ಶ್ರೀ ಬಾರಿಯಂಡ ಆರ್ ಜೋಯಪ್ಪ ಇವು.

**ಅರೆಬಾಸೆಲಿ ಪ್ರಕಟ ಆದ ಪುಸ್ತಕಗಳ ವಿವರ ಈ ರೀತಿ ಉಟ್ಟು:**

1. ಗೌಡ ಕನ್ನಡದ ಜನಪದ ಕತೆಗಳು, ವಿಶ್ವನಾಥ ಬದಿಕಾನ, ಮದಿಪು ಪ್ರಕಾಶನ, ಮಂಗಳ ಗಂಗೋತ್ರಿ, 1994.
2. ಚಾಂಪಾ, ಬಾರಿಯಂಡ ಆರ್ ಜೋಯಪ್ಪ, ಕೊಡಗು ಗೌಡ ವಿದ್ಯಾಸಂಘ, ಕೊಡಗು, 2003.
3. ಅಜ್ಜಪ್ಪನ ಕಥಾ ಭಂಡಾರಂದ ಹೆರ್ಕಿದ ಕಥೆಗ, ಎಂ.ಜಿ. ಕಾವೇರಮ್ಮ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, 2015.
4. ಗುಬ್ಬಿಗೂಡೆ, ಲೋಕೇಶ್ ಊರುಬೈಲು, ವಿನಾಯಕ ಪ್ರೆಸ್, ಸಂಪಾಜೆ, 2015.
5. ಜೋನಿಬೆಲ್ಲ ಅರೆಬಾಸೆ ಕತೆಗ, ಕುಞೇಟಿ ಶಿವರಾಮ ಗೌಡ, ವ್ಯಾಸ ಸೇವಾ ಟ್ರಸ್ಟ್, 2016.
6. ಅರೆಬಾಸೆನ ಅಜ್ಜಿ ಕತೆಗ, ವಿಶ್ವನಾಥ ಬದಿಕಾನ, ಕೊಡಗು ಮತ್ತು ದಕ್ಷಿಣ

ಕನ್ನಡ ಗೌಡ ಸಂಘ, ಬೆಂಗಳೂರು, 2016.

7. ಹೊಸ ಬೊದ್ಕು, ಉದಯ ಕುಮಾರಿ ಚೆಂಬು, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, 2016.
8. ಬೊಳ್ಪು, ಲೋಕೇಶ್ ಕುಂಚಡ್ಕ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, 2016.
9. ನೆನ್ಪುನ ಜೊಂಪೆ, ವಿನೋದ್ ಮೂಡಗದ್ದೆ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, 2018.
10. ಮಿಣ್ಪುಳಿ, ಡಾ ಪುನೀತ್ ರಾಘವೇಂದ್ರ, ಕುಂಟುಕಾಡು, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, 2019.
11. ತಬ್ಲಿ ಮಂಜ, ಪಿ.ಜಿ. ಅಂಬೆಕಲ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ–2019.
12. ಅಪ್ಪ ಹೇಳ್ದ ಹತ್ತ್ ಕತೆಗ, ಭವಾನಿಶಂಕರ ಅಡ್ತಲೆ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ–2019.
13. ಅಪೂರ್ವ ಸಂಗಮ, ಕಟ್ರತನ ಲಲಿತಾ ಅಯ್ಯಣ್ಣ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ–2019.

## ಅರೆಬಾಸೆಲಿ ಪ್ರಕಟ ಆದ ಕತೆ ಪುಸ್ತಕಗಳ ಸಣ್ಣ ಪರಿಚಯ

### 1. ಗೌಡ ಕನ್ನಡದ ಜನಪದ ಕತೆಗಳು :

ಅರೆಬಾಸೆ ಕತೆಗಳ ಬಗ್ಗೆ ಸುರೂಗೆ ಸಂಶೋಧನೆ ಮಾಡಿ ಕತೆ ಬರೆವುಕೆ ಅಡಿಪಾಯ ಹಾಕಿ ಕೊಟ್ಟೊದ್ ಡಾ.ವಿಶ್ವನಾಥ ಬದಿಕಾನ. ವೃತ್ತಿಲಿ ಕಾಲೇಜ್ ಲೆಕ್ಚರರ್ ಆಗಿರುವ ಇವು 1991ರ್ಲಿ ಡಾ.ಪುರುಷೋತ್ರಮ ಬಿಳಿಮಲೆ ಇವರ ಮಾರ್ಗದರ್ಶನಲಿ 'ಗೌಡ ಕನ್ನಡದ ಜನಪದ ಕತೆಗಳು' ಎಂಬ ಪ್ರಬಂಧನ ಸಿದ್ದ ಮಾಡಿ ಎಂ ಫಿಲ್ ಪದವಿಗೆ ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದೊ. ಆ ಪ್ರಬಂಧನ ಸಣ್ಣಪುಟ್ಟ ತಿದ್ದ್‌ಪೊಡಿ ಮಾಡಿ 1994ರ್ಲಿ ಪುಸ್ತಕ ರೂಪಲಿ ಹೊರತಂದೊ. ಈ ಪುಸ್ತಕಲಿ ಕತೆಸಂಗ್ರಹ ಮಾಡಿಕೆ ಊರ್‌ಗಳ ಸುತ್ತಾಟ ಮಾಡ್‌ಕನ ಆದ ಅನುಭವಗಳ ಸಹ ಹಂಚಿಕೊಂಡೊಳೊ. ಇವು ಈ ಪುಸ್ತಕಲಿ ಅರೆಬಾಸೆಲಿರುವ ಅಜ್ಜಿಕತೆಗಳ ಮಾತ್ರ ಹೆರ್ಕಿ ಬರ್ದೊಳೊ. ಇದ್ ಇಡೀ ಒಂದು ಪೂರ್ತಿ ಕತೆಯೇ ಇರುವ ಪುಸ್ತಕ ಅಲ್ಲ. ಇಲ್ಲಿ ಕತೆ ಉಟ್ಟು, ವಿಮರ್ಶೆ ಉಟ್ಟು ಮತ್ತೆ ಸಂಶೋಧನೆಗಳ ಮಾಹಿತಿ ಉಟ್ಟು. ಅರೆಬಾಸೆ ಜನಪದ ಕತೆಗಳ ಸಂಗ್ರಹ

ಮಾಡಿ ಸುರೂಗೆ ಬರಹದ ಮೂಲಕ ಅರೆಬಾಸೆವುಕೆ ಸಿಗುವಂಗೆ ಮಾಡ್ದ್ ವಿಶ್ವನಾಥ ಬದಿಕಾನವು. ಇದರ್ಲಿ ಗೌಡ ಕನ್ನಡದ ಜನಪದ ಕತೆಗಳ ಸ್ಥೂಲ ಸಮೀಕ್ಷೆನ ವಿವರಗಳ ಬರ್ದೊಳೊ. ಅದರ್ಲಿ ಕತೆಗಳ ವರ್ಗಗಳ ಮಾಡಿ ವಿಭಾಗ ಮಾಡೆಳೊ. ಪ್ರಾಣಿಗಳ ಕತೆಗ, ಸಾಮಾನ್ಯ ಜನಪದ ಕತೆಗ, ಹಾಸ್ಯಕತೆಗ, ಹನಿಕತೆಗ, ಸೂತ್ರಕತೆಗತೇಳಿ ವಿಂಗಡಿಸೆಳೊ. ಪುಸ್ತಕದ ಕೊನೆಭಾಗ ಅನುಬಂಧಲಿ ಅರೆಬಾಸೆನ 12 ಕತೆಗಳ ಸೇರ್ಸೆಳೊ.ಅನುಬಂದ ಎರ್ಡರ್ಲಿ ಪದಸೂಚಿಗಳ ಕೊಟ್ಟೊಳೊ. ಇದ್ ಒಂದು ಸಂಶೋಧನೆಗೆ ಸಂಬಂಧಪಟ್ಟ ಪುಸ್ತಕ ಆದರೂ ಈ ಪುಸ್ತಕ ಅರೆಬಾಸೆ ಸಾಹಿತ್ಯಕ್ಕೆ ಅದರ್ಲೂ ಅರೆಬಾಸೆ ಸಣ್ಣಕತೆಗಳ ಬರವಣಿಗೆಗೆ ಮತ್ತು ಆಳ್‌ದ್ ಹೋಗುವ ಹಂತಲಿದ್ದ ಕತೆಗಳ ಉಳಿಸಿಕಂಕೆ ಒಂದು ದೊಡ್ಡ ಅಡಿಪಾಯ ಹಾಕಿಕೊಟ್ಟುಟು.

## 2. ಚಾಂಪಾ

ಬಾರಿಯಂಡ ಆರ್ ಜೋಯಪ್ಪನವು ಬರ್ದ 'ಚಾಂಪಾ' ಕತೆ ಪುಸ್ತಕ ಅರೆಬಾಸೆನ ಸುರೂನ ಕತೆ ಪುಸ್ತಕ. ಇದ್ಕೆ ಮುಂದೆ ಅರೆಬಾಸೆಲಿ ಡಾ.ವಿಶ್ವನಾಥ ಬದಿಕಾನ ಇವು 1994ರ್ಲಿ ಕತೆಪುಸ್ತಕ ಬರ್ದರೂ ಅದ್ ಸಂಶೋಧನಾ ರೂಪಲಿ ಉಟ್ಟು. ಅಂದರೆ ಅದರ್ಲಿ ಕತೆಗ ಕನ್ನಡ ಮತ್ತು ಅರೆಬಾಸೆ ಎರ್ಡರ್ಲಿಯೂ ಉಟ್ಟು. ಜೊತೆಗೆ ಕತೆಗಳ ವಿಶ್ಲೇಷಣೆಗಳನೂ ಅದರ್ಲಿ ಬರ್ದೊಳೊ. ಆದರೆ ಚಾಂಪಾ ಕತೆ ಪುಸ್ತಕಲಿ ಎಲ್ಲಾ ಕತೆಗಳೂ ಅರೆಬಾಸೆಲೇ ಇದ್ದ್ ಬೇರೆ ಯಾವುದೇ ವಿಶ್ಲೇಷಣೆಗ ಇಲ್ಲೆ. ಒಟ್ಟ್ 101 ಪುಟಗ ಇರುವ ಈ ಪುಸ್ತಕಲಿ 30 ಸಣ್ಣ ಕತೆಗ ಒಳ. ಕೊಡಗು ಗೌಡ ವಿದ್ಯಾಸಂಘದ ಪ್ರಕಾಶನಲಿ ಹೊರಬಂದ ಈ ಕತೆ ಪುಸ್ತಕಕ್ಕೆ ಬರಹಗಾರ ಕೆ.ಆರ್. ವಿದ್ಯಾಧರ ಇವು ಮುನ್ನುಡಿ ಬರ್ದೊಳೊ. ಇವರ ಕೆಲವು ಕತೆಗ 'ಗೌಡದೊನಿ', 'ಕೊಡಗು ಸಂಗಾತಿ' ಮತ್ತು ಬೇರೆ ಬೇರೆ ನೆಂಪುನ ಸಂಚಿಕೆಗಳ್‌ಲಿ ಪ್ರಕಟ ಆವುಟು. ಇವರ ಕತೆ ವಸ್ತುಗ ಇಂತದೇಂತೇಳಿ ಇಲ್ಲೆ. ಆದರೆ ಅದ್ ನಮ್ಮ ಜೀವನಕ್ಕೆ ಹತ್ತಿರ ಇರ್ವ ವಿಷಯ. ಈ ಕತೆಲಿ ಬರುವ ನೀಲಮ್ಮಾಂಟಿ ತರದವು, ನಾಣಿಯಂತ ವ್ಯಕ್ತಿಗ, ಕೊಲೆ ದೈವಗಳ ಹೆದ್‌ರಿಕೆ ಹುಟ್ಟಿಸುವ ಕತೆ ಹೇಳೊವು, ಹಠಮಾರಿ ಜನಗ, ಪುಟ್ಟಯ್ಯನಂತ ಪುಕ್ಕೆಲಂಗ, ಚೆನ್ನಿಗೂಡೆನಂತ ಸಾದು ಗೂಡೆಗ ನಮ್ಮ ಸುತ್ತಮುತ್ತ ಒಳೊ. ಇವರ ಕತೆಲಿ ಮನೋರಂಜನೆ ಉಟ್ಟು, ಹಾಸ್ಯ ಉಟ್ಟು ಹಾಂಗೇ ಗಂಭೀರ ಆಗಿ ಕುದ್ದ್ ಆಲೋಚನೆ ಮಾಡುವ ಕತೆಗಳೂ ಒಳೊ. ಸಣ್ಣ ಕತೆಗಳ ಪುಸ್ತಕ ಬರ್ದ್ ಅರೆಬಾಸೆ ಸಾಹಿತ್ಯ ಬೆಳ್ಸಿಕೆ ಬಾರಿಯಂಡ ಜೋಯಪ್ಪನವು ಹಾಕಿಕೊಟ್ಟ ಅಡಿಗಲ್. ಭದ್ರವಾಗಿ ನೆಲೆ ನಿಂತುಟು.

**3. ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ :**

ಎಂ. ಜಿ. ಕಾವೇರಮ್ಮ ಬರ್ದ ಕತೆ ಪುಸ್ತಕ 'ಅಜ್ಜಪ್ಪನ ಕತಾಭಂಡಾರಂದ ಹೆರ್ಕಿದ ಕತೆಗ' 2015ರ್ಲಿ ಅರೆಬಾಸೆ ಅಕಾಡೆಮಿ ಮೂಲಕ ಪ್ರಕಟ ಆತ್. ಒಟ್ಟ್ 60 ಪುಟಗ ಇರ್‍ವ ಈ ಪುಸ್ತಕಲಿ 15 ಕತೆಗ ಒಳೊ. ಇದರ್ಲಿ ಇರುವ ಕತೆಗಳ ಇವು ಇವರ ಅಪ್ಪನ ಅಪ್ಪ ಹೇಳ್ದ ಕತೆಗಳಂದ ಹೆರ್ಕಿ ತೆಗ್ದದ್. ಸುಮಾರು 1850–1956 ಸಮಯಲಿ ಬಾಳಿ ಬೊದ್ಕಿದ ಸೂಂತೋಡು ಬೋಳ ಗೌಡ್ರು ಒಬ್ಬ ಕತೆಗಾರ ಮಾತ್ರ ಅಲ್ಲ, ನಾಟಿಮೊದ್ದು ಕೊಡುವ ಪಂಡಿತನೂ ಆಗಿದ್ದೊ ಗಡ. ಆದರೆ ಅವುಕೆ ಓದಿಕೆ ಬರೆಕೆ ಬಾರದ ಕಾರಣ ಅವರ ಕೆಲ್ಸನ ವಿದ್ಯೆ ಕಲ್ತ ಅವರ ಪುಳ್ಳಿ ಎಂ.ಜಿ. ಕಾವೇರಮ್ಮನವು ಮಾಡೆಳೊ. ಬೋಳಗೌಡ್ರ ಕಾಲಮಾನ ನೋಡ್‌ಕನ ನಮ್ ಅರೆಬಾಸೆ ಬಗ್ಗೆ ನಾವುಗೆ ಹೆಮ್ಮೆ ಆದೆ. ಬಹುಶಃ ಅವು ಅವರಜ್ಜಿ–ಅಜ್ಜಂದ ಈ ಕತೆಗಳ ಕೇಳಿಕಂಡ್ ಬಂದಿರುವ ಸಾಧ್ಯತೆ ಉಟ್ಟು. ಅಂದರೆ ಏನಿಲ್ಲದಿದ್ರೂ ಅರೆಬಾಸೆ ಕತೆಗಳಿಗೆ ಕಮ್ಮಿಲಿ ಹೇಳ್ದಾದ್ರೂ 150 ವರ್ಷಗಳ ಚರಿತ್ರೆ ಉಟ್ಟು. ಲೇಖಕಿ ಎಂಟಂರ್ದ ಹತ್ತ್ ವರ್ಸ ಪ್ರಾಯ ಇರ್‌ಕನ ಅಜ್ಜನ ಬಾಯಿಂದ ಕೇಳ್ದ ಕತೆಗಳ ತಮ್ಮಂದೊರೊಟ್ಟಿಗೆ ಸಹ ಕೇಳಿಕಂಡ್ ಬರ್ದ್ ಅರೆಬಾಸೆವುಕ್ಕೆ ಕತೆಗಳ ಭರ್ಜರಿ ಬಾಡೂಟ ಹಾಕೊಳೊ. ನಾವುಗೆ ಅಡಿಪಾಯ.

**4. ಗುಬ್ಬಿಗೂಡೆ :**

ಲೋಕೇಶ ಊರುಬೈಲು ಇವು 2015ರ್ಲಿ ಪ್ರಕಟಮಾಡ್ದ ಅರೆಬಾಸೆ ಕತಾ ಜೊಂಪೆ 'ಗುಬ್ಬಿ ಗೂಡೆ' ಅರೆಬಾಸೆನ ಒಂದು ಜನಪ್ರಿಯ ಕತೆ ಪುಸ್ತಕ. ಈ ಪುಸ್ತಕಕ್ಕೆ ಯಾರೊಂದೊಳೂ ಮುನ್ನುಡಿ ಬರ್ಸಿತ್ತಿಲೆ. ಆದರೆ ಗಂಗಾಧರ ಡಿ ಇವು ಬೆನ್ನುಡಿ ಬರ್‍ದೊಳೊ.ಈ ಪುಸ್ತಕಲಿ ಒಟ್ಟು 64 ಪುಟಗ ಇದ್ದ್ 10 ಕತೆಗಳ ಮುತ್ತುನಂಗೆ ಜೋಡ್ಸಿ ಓದುಗರ ಕೈಗೆ ಕೊಟ್ಟೊಳೊ. ಆಕಾಶವಾಣಿಲಿ ಮತ್ತು ಬೇರೆ ಬೇರೆ ಪತ್ರಿಕೆಗಳ್‌ಲಿ ಇವರ ಹಲವಾರ ಕತೆಗ ಅರೆಬಾಸೆಯವರ ಕೆಬಿಲಿ ಗುಂಯ್ ಗುಟ್ಟಿಟು ಮತ್ತು ಮನಸ್‌ಲ್ ಅಚ್ಚಾವುಟು.ಇವರ ಎಲ್ಲಾ ಕತೆಗಳಲಿ ಬಾವನೆಗಳ ಗಂಟ್‌ಮೂಟೆ ಉಟ್ಟು, ಗಂಭೀರತೆ ಉಟ್ಟು, ಸಂಬಂಧಗಳ ಕೊಂಡಿಗಳಿಗೆ ಬೆಸುಗೆ ಹಾಕುವ ಪ್ರಯತ್ನ ಕಂಡದೆ. ವ್ಯಕ್ತಿ, ಕುಟುಂಬ, ಸಮಾಜದ ಸುತ್ತ ನೆಯ್ದ ಕತೆಗ ನಮ್ಮ ಬಂದನಲಿ ಕಟ್ಟಿಬಿಟ್ಟವೆ. ಗುಬ್ಬಿಗೂಡೆ ಒಂದು ಪ್ರೇಮಕತೆ. ಆದರೂ ಒಳಾರ್ಥಬೇರೆ ಉಟ್ಟು. ಪುಸ್ತಕದ ಸುರೂನ ಕತೆ 'ಕೆಂದಾಳೆ' ದೊಡ್ಡ ಸಮಸ್ಯೆಗಳಿಗೆ ಸಣ್ಣ ಪರಿಹಾರ ಸೂಚಿಸಿ ಸುಖಾಂತ್ಯ ಕಾಣುವ ನಿರೂಪಣೆ ಉಟ್ಟು. ಉಳ್ದ ಕತೆಗ 'ಚೋಮುಗ್ಗವ್ವ', 'ನಾನೂ ಅವ್ಳೂ ಮತ್ತೆ ಪ್ರೀತಿ ಕುಟುಂಬ', 'ಕೆಂಪು ಕಣ್ಣ್‌ನೀರ್',

'ಪೂಜಾರ್ಮೇರ್', 'ನವಿಲ್ಗರಿ', 'ಉಪ್ಪರ್ಕೆ ಮನೆ' ಮತ್ತು 'ಶೇಕಲಪ್ಪ' ಓದುವರರ ಒಂದು ಭಾವನಾಲೋಕಕ್ಕೆ ತಕಂಡ್ ಹೋದೆ.

## 5. ಜೋೀನಿ ಬೆಲ್ಲ :

ಕುಞೇಟಿ ಶಿವರಾಮ ಗೌಡ್ರು ಬರ್ದ 'ಜೋನಿಬೆಲ್ಲ' ಅರೆಬಾಸೆ ಕತಾ ಭಂಡಾರಕ್ಕೆ ಇನ್ನೊಂದು ಕೊಡುಗೆ. ವ್ಯಾಸ ಅನ್ನುವ ಕಾವ್ಯನಾಮಲೇ ಹೆಚ್ಚಾಗಿ ಬರೆವ ಇವು ಅರೆಬಾಸೆ ಸಾಹಿತ್ಯ ಮತ್ತು ಸಂಸ್ಕೃತಿ ಅಕಾಡೆಮಿನ ಮಾಜಿ ಸದಸ್ಯರೂ ಹೌದು. ವೃತ್ತಿಲಿ ಹೈಸ್ಕೂಲು ಮಾಸ್ಟ್ರ ಆಗಿ ನಿವೃತ್ತಿ ಆದ ಇವರ ಪ್ರವೃತ್ತಿಗಳ್‌ಲಿ ಸಾಹಿತ್ಯವೂ ಒಂದು. ವ್ಯಾಸ ಸೇವಾ ಟ್ರಸ್ಟ್(ರಿ) ಇದರ ಪ್ರಕಾಶನಲಿ ಹೊರಗೆ ಬಂದ ಈ ಕತೆ ಪುಸ್ತಕನ ಸಮಾಜದ ಎಲ್ಲಾ ಬಾಂದವುಕೆ ಸಮರ್ಪಣೆ ಮಾಡೆಳೊ. ಒಟ್ಟು 67 ಪುಟಗ ಇರುವ ಈ ಪುಸ್ತಕಲಿ 14 ಕತೆಗ ಒಳೊ. ದಿ.ಯು.ಸುಬ್ರಾಯ ಗೌಡ್ರು (ಯು.ಸು.ಗೌ) ಇವು "ಇಲ್ಲಿ ಕಾಂಬ ಹೆಚ್ಚಿನ ಕತೆಗ ಅರೆಬಾಸೆ ಮಾತಾಡುವವರ ಬೊದ್ಕ್‌ನ ಸೂಕ್ಷ್ಮ ಸಂಗ್ತಿಗಳ ತಿಳ್ಸುವೆ" ಅಂತ ಹೇಳೆಳೊ. ಐವತ್ತ್ ಅರ್ವತ್ತ್ ವರ್ಸಕೆ ಹಿಂದೆ ಇದ್ದ ನಮ್ಮ ಊರ್‍ನ ಜನಜೀವನ ರೀತಿ ರಿವಾಜ್‌ಗಳ ಇವು ಕತೆಲಿ ಕಟ್ಟಿ ಕೊಟ್ಟೊಳೊ. ಇದ್ಕೆ ಹಿರಿಯ ವಿದ್ವಾಂಸ ಶ್ರೀ ತಮ್ಮಯ ಗೌಡ ಮುಡೂರು ಅವು ಸೋಕುನ ಮುನ್ನುಡಿ ಬರ್ದ್ ಶುಭ ಕೋರೆಳೊ.ಇವರ ಕತೆಗ ಒಂದು ರೀತಿ ಲಲಿತ ಪ್ರಬಂಧಗಳಂಗೆ ಕಾಣುದರ ಒಟ್ಟಿಗೆ ಓದುಗ್‌ರಿಗೆ ಜೇನುತುಪ್ಪ ತಿಂದಷ್ಟೇ ಸುಖಾನುಭವ ಕೊಟ್ಟದೆ. ಇವರ ಹದಿನಾಲ್ಕ್ ಕತೆಗಳ್‌ಲಿ ಕಡೇನ ಎರ್ಡ್ ಕತೆಗ 'ಕನ್ಸಾದ್ರೂ ಸತ್ಯ' ಮತ್ತು 'ಪಾಕಿಸ್ತಾನ ಯುದ್ಧ' ಸ್ವಲ್ಪ ಬೇರೆ ರೀತಿಲಿ ಉಟ್ಟು. ಒಂದು ಇತಿಹಾಸದ ಘಟನೆನೆ ಕತೆರೂಪಲಿ ಲಾಯಿಕ್ ಮಾಡಿ ಬರ್ದಳೊ. ಇವರ ಇತಿಹಾಸ ಪ್ರಜ್ಞೆ, ಅದರ ಕತೆರೂಪಲಿ ಬರೆವ ಕಲೆ ಸಾಹಿತ್ಯಲೋಕಕೆ ಒಂದು ಬೇರೆ ರೀತಿಯ ಪ್ರಯೋಗಕ್ಕೆ ಅಡಿಪಾಯ ಹಾಕಿದಂಗೆ ಕಂಡದೆ.

## 6. ಅರೆಬಾಸೆನ ಅಜ್ಜಿಕತೆಗ :

ಅರೆಬಾಸೆ ಸಣ್ಣಕತೆಗಳ ಸಂಗ್ರಹ ಮತ್ತು ಪ್ರಕಟಣೆಗೆ ಬುನಾದಿ ಹಾಕಿಕೊಟ್ಟವು ಡಾ ವಿಶ್ವನಾಥ ಬದಿಕಾನ. ಇವು 1991ರ್ಲಿ ಎಂ.ಫಿಲ್ ಅಧ್ಯಯನಕ್ಕೆ ಸಂಗ್ರಹ ಮಾಡ್ದ ಕತೆಗಳ ಮೂಲರೂಪಲೇ ಈ ಪುಸ್ತಕಲಿ ಬರ್‍ದೊಳೊ. ಈ ಕತೆಪುಸ್ತಕನ 2016ರ್ಲಿ ಕೊಡಗು ಮತ್ತು ದಕ್ಷಿಣಕನ್ನಡ ಗೌಡ ಸಂಗ ಬೆಂಗಳೂರು ಇವು ಪ್ರಕಟ ಮಾಡೆಳೊ. ಇದರ್ಲಿ ಎಲ್ಲಾ 101 ಕತೆಗಳ ಸಾ ಅರೆಬಾಸೆಲಿ ಬರ್‍ದೊಳೊ. ಅದರ್ಲಿ

ಹೆರ್ಕಿದ 5 ಕತೆಗಳ ಕನ್ನಡಕ್ಕೆ ಸಾ ಅನುವಾದ ಮಾಡೆಳೊ. ಅನುಬಂಧ ಒಂದರ್ಲಿ ಈ ಅನುವಾದ ಮಾಡ್ದ ಕತೆಗ ಇದ್ದರೆ ಎರ್ಡರ್ಲಿ ಅರೆಬಾಸೆ ಶಬ್ದಕೋಶನ ಕೊಟ್ಟಳೊ.ಅನುಬಂದ ಮೂರರ್ಲಿ ಇವ್ಕೆ ಕತೆಹೇಳ್ದ ವ್ಯಕ್ತಿಗಳ ಪಟ್ಟಿ ಕೊಟ್ಟೊಳೊ. ಈ ನೂರೊಂದು ಕತೆಗಳ್‌ಲಿ ಬೇರೆ ಬೇರೆ ವರ್ಗದ ಕತೆಗ ಒಳ. ಪ್ರಾಣಿಕತೆಗ– ಕಾಡ್ ಮತ್ತೆ ಸಾಕಿದ ಪ್ರಾಣಿಗ, ಹಕ್ಕಿಗ ಇತ್ಯಾದಿ, ಸಾಮಾನ್ಯ ಕತೆಗ, ಮಾಂತ್ರಿಕ ಕತೆಗ, ಧಾರ್ಮಿಕ ಕತೆಗ, ರಮ್ಯಕತೆಗ, ಮೂರ್ಖ ರಾಕ್ಷಸ ಕತೆಗ, ಹಾಸ್ಯ ಕತೆಗ, ಹನಿಕತೆಗ, ಮುಗಿಯದ ಕತೆಗ, ಹಿಂಗೆ ಬೇರೆ ಬೇರೆ ವರ್ಗ ಆಶಯ ಇರ್ವ ಕತೆಗ ಒಳೊ. ಇಲ್ಲಿರುವ ಜನಪದ ಕತೆಗಳ್‌ಲಿ ವರ್ಣನೆ ಹೋಲಿಕೆಗೆ ಕಮ್ಮಿ. ಕಥೆನ ತಿರ್‌ಳ್ ಅಥವಾ ವಸ್ತ್‌ಗೆ ಮಾತ್ರ ಸ್ಥಾನ. ಬುದ್ದಿವಂತಿಕೆನ ಪ್ರದರ್ಶನ, ದಡ್ಡತನಂದಾಗಿ ಆಗುವ ಸೋಲುಗ, ಧೈರ್ಯ ಸಾಹಸಗಳಿಗೆ ಒತ್ತುಕೊಟ್ಟ್ ಕತೆ ಕಟ್ಟಿದ ರೀತಿಗಳ ನೋಡಿರೆ ನಮ್ಮ ಅರೆಬಾಸೆ ಮಾತಾಡುವ ಹಿರಿಯರ ಬುದ್ಧಿವಂತಕೆ ಎಷ್ಟಿತ್ ತೇಳಿಗೊತ್ತಾದೆ. ಒಟ್ಟು 101 ಕತೆಗಳ 220 ಪುಟಲಿ ಮುಗ್ಸೆಳೊ. ಅದರ್ಲಿ ಕೆಲವು ಕತೆಗ ಬರೇ ಅರ್ಧಪುಟ ಮಾತ್ರ ಇರ್ದು. ಬದಿಕಾನವು ಊರೂರು ಅಲೆದಾಡಿ ಬಾರೀ ಕತೆಗಳ ಸಂಗ್ರಹಮಾಡಿ ಅರೆಬಾಸೆಲಿ ಅಳ್‌ದ್ ಹೋಗುವ ಹಂತಲಿದ್ದ ಈ ಕತಾಕಣಜನ ರಕ್ಷಣೆ ಮಾಡೆಳೊ.

**7. ಹೊಸಬೊದ್ಕು :**

ಉದಯಕುಮಾರಿ ಚೆಂಬು ಇವು ಬರ್ದ 'ಹೊಸ ಬೊದ್ಕು' ಅರೆಬಾಸೆ ಕತೆ ಪುಸ್ತಕನ 2016ರ್ಲಿ ಅರೆಬಾಸೆ ಅಕಾಡೆಮಿಯವು ಪ್ರಕಟ ಮಾಡ್ರೊ. ಒಟ್ಟ್ 104 ಪುಟ ಇರುವ ಕತೆ ಪುಸ್ತಕಲಿ 20 ಕತೆಗ ಒಳೊ. ಅವರ ಈ ಸುರೂನ ಕತೆ ಪುಸ್ತಕಕ್ಕೆ ಸಂಗೀತ ರವಿರಾಜ್ ಇವು ಮುನ್ನುಡಿ ಬರ್ದೊಳೊ. ಇವು ಕತೆ ಕವಿತೆಗಳ ಬರ್ದ್ ತಾವೇ ಸ್ವತ ಮಡಿಕೇರಿ ಆಕಾಶವಾಣಿಲಿ ಓದಿ, ಹಾಡಿ ಜನಪ್ರಿಯತೆ ಪಡ್ದೊಳೊ. ಈ ಪುಸ್ತಕದ ಸುರೂನ ಕತೆ 'ಕೈಗೆ ಬಂದದ್ ಬಾಯಿಗೆ ಬಾತ್ಲೆ' ಇದರ್ಲಿ ಗೀತನ ತ್ಯಾಗ, ತೊಳಲಾಟ ವಿಜಯನ ಸಹನೆ, ಯಾರದೋ ತಪ್ಪಿಗೆ ಯಾರೋ ಶಿಕ್ಷೆ ಅನುಭವಿಸುವ ವಿಧಿನಿಯಮ ಓದುಗರ ಮನ್‌ಸ್‌ಲಿ ಇರುವಂಗೆ ಬರ್ದೊಳೊ. ಎಲ್ಲಾ ಕತೆಗಳ್‌ಲಿ ಸಹ ಭಾವನೆಗಳಿಗೆ ಆದ್ಯತೆ ಕೊಟ್ಟ್ ಬರ್ದಂಗೆ ಕಂಡದೆ. ಜೀವನ ಅನುಭವಗಳಿಗೆ ಇವರ ಕತೆಲಿ ಜಾಗೆ ಉಟ್ಟು. ಇವರ ಕತೆಲಿರುವ ವಿಷಯಗ, ಭಾವನೆಗಳ ನಿರೂಪಣೆ ಮಾಡ್ದ ಶೈಲಿ ಮತ್ತು ಜನರ ಬೊದ್ಕಿಗೆ ಹತ್ತಿರ ಇರುವ ವಿಷಯಗಳ ನೋಡಿರೆ ಬೇರೆ ಬಾಸೆಗಳಿಗೆ ಅನುವಾದ ಮಾಡಿಕೆ ಎಲ್ಲಾ ರೀತಿಲೂ ಅರ್ಹತೆ ಉಟ್ಟು ತೇಳಿ ಕಂಡದೆ.

8. ಬೊಳ್ಪು :

ಲೋಕೇಶ್ ಕುಂಚಡ್ಕ ಇವು ಅರೆಬಾಸೆ ಅಕಾಡೆಮಿ ಮೂಲಕ 2016ರ್ಲಿ ಪ್ರಕಟಮಾಡ್ದ. 'ಬೊಳ್ಪು' ಕತಾ ಸಂಕಲನಲಿ ಒಟ್ಟು 50 ಪುಟಗ ಇದ್ದ್ ಏಳ್ ಕತೆಗ ಒಳೊ. ಇವರ ಕತೆಗಳ್‌ಲಿ ಸ್ವಲ್ಪ ಮಟ್ಟಿಗೆ ವೈಚಾರಿಕತೆ ಇರ್ದು ಕಂಡ್ ಬಂದದೆ. ರಾಜಕೀಯ ವ್ಯವಸ್ಥೆಗಳ ಸಣ್ಣ ವಿಶ್ಲೇಷಣೆ ಉಟ್ಟು. ಸಮಾಜಲಿ ಗಂಡ್ ಹೆಣ್ಣ್‌ನ ನಡುವೆ ಇರುವ ಸಂಬಂಧಗಳ ಚಿತ್ರಣ, ಪಂಡ್‌ಕಾಲದ ಜನರ ಕಷ್ಟ ಕಾರ್ಪಣ್ಯಗ ಇವೆಲ್ಲ ಇವರ ಕತೆಗಳ್‌ಲಿ ಕಂಡ್‌ಬರುವ ಸೂಕ್ಷ್ಮ ಅಂಶಗ. ಇದರ್ಲಿರುವ ಸುರೂನ 'ಸೊಂಮ್ಪನ ಕಾರ್‌ಬಾರ್' ಕತೆಲಿ ಸರಕಾರಿ ಕೆಲಸ ಎಷ್ಟ್ ನಿಧಾನ ಅಂದ್‌ಂದಲೇ ಆಗ್ತಿದ್ದೊ ಎಂಬ ಅಂಶ ಗೊತ್ತಾದೆ. ಅಧಿಕಾರಿಗಳ ಅದಕ್ಷತೆನ ಈ ಕತೆಲಿ ನಿರೂಪಿಸೆಳೊ. ಎರ್ಡನೆ ಕತೆ 'ಮಂಜನ ತರ್‌ಲ್ಲೆ' ಒಂದು ಹಳ್ಳಿ ಬೊದ್ಕುನ ಚಿತ್ರಣ ಕೊಟ್ಟದೆ ಹಾಂಗೆ ಉಳ್ದ ಎಲ್ಲಾ ಕತೆಗಳೂ ಬೊದ್ಕ್‌ನ ಬೇರೆ ಬೇರೆ ವಿಷಗಳ ಮೇಲೆ ನಿರೂಪಣೆ ಆಗೊಳೊ.

9. ನೆನ್ಪುನ ಜೊಂಪೆ :

ವಿನೋದ್ ಮೂಡಗದ್ದೆವು ಬರ್ದ 'ನೆನ್ಪುನ ಜೊಂಪೆ' ಒಂದು ಅರೆಬಾಸೆ ಕತೆ ಪುಸ್ತಕ. ಒಟ್ಟು 74 ಪುಟಗ ಇರ್ವ ಈ ಪುಸ್ತಕಲಿ 24 ಸಣ್ಣಕತೆಗ ಒಳ. ಈ ಪುಸ್ತಕನ 2018ರ್ಲಿ ಅರೆಬಾಸೆ ಅಕಾಡೆಮಿಯವು ಪ್ರಕಟಮಾಡ್ದೊ. ಇದ್ಕೆ ಬಾರಿಯಂಡ ಜೋಯಪ್ಪನವು ಒಳ್ಳೆ ಮುನ್ನುಡಿ ಬರ್ದೊಳೊ. ಕತೆಗಾರನೇ ನಿರೂಪಕನಾಗಿ, ತನ್ನ ಅನುಭವನವೇ ಕತೆಯಾಗಿ ಹೇಳುವ ಮೂಲಕ ವಿನೋದ್ ಯಶಸ್ವಿಯಾಗೊಳೊತೇಳುವ ಮಾತ್‌ನ ಬಾರಿಯಂಡವು ಮುನ್ನುಡಿಲಿ ಹೇಳೆಳೊ. ವಿನೋದ್‌ರವರ ಪ್ರತಿಯೊಂದು ಕತೆಲಿಯೂ ಜೀವನದ ಒಂದೊಂದು ಅನುಭವನ ನಿರೂಪಣೆ ಮಾಡ್ತಾ ಹೋಗೊಳೊ. ಸುರೂನ ಕತೆ 'ಕ್ಯಾಮರ' ಸಹ ಒಂದು ಅನುಭವದ ಜೊಂಪೆಲಿ ಆದ ಕಾಯಿ. 'ಗುಮ್ಮ' ಕತೆಯೂ ಬಾಲ್ಯದ ಒಂದು ಸಿಹಿ ಅನುಭವವೇ. 'ಕಣ್ಕೆಂಪು' ಕತೆ ಹೆಂಗೆ ಕೆಲವು ಸರ್ತಿ ನಮ್ಮ ಜೀವನದ ತಿರುವುಗ ಬದಲಾವಣೆ ಆದೆ ತೇಳ್ದರ ಹೇಳ್ದೆ. ಇವರ ಕತೆಗಳ್‌ಲಿ ತಿಳಿ ಹಾಸ್ಯವೂ ಉಟ್ಟು. 'ಹೇರ್ ಡೈ' ಕತೆ ಇದ್ಕೆ ಒಂದು ಉದಾರ್‍ಣೆ. 'ಹಾನೆ(ಆನೆ)' ಕತೆಲಿ ಸಹ ಅಂತ ತಿಳಿಹಾಸ್ಯ ಬರ್ದೊಳೊ.

10. ಮಿಣ್ಪುಳಿ:

ಇದೊಂದು ಅರೆಬಾಸೆ ಕಥಾ ಜೊಂಗೆ. ಡಾ. ಪುನೀತ್ ರಾಘವೇಂದ್ರ

ಕುಂಟುಕಾಡು 2019ರಲ್ಲಿ ಅರೆಬಾಸೆ ಅಕಾಡೆಮಿಯವರ ಪ್ರಕಾಶನಲಿ ಇದರ ಹೊರತಂದೊ. ಅಕಾಡೆಮಿ ಅಧ್ಯಕ್ಷರಾಗಿದ್ದ ಶ್ರೀ ಪಿ.ಸಿ.ಜಯರಾಮ ಇವು ಅಧ್ಯಕ್ಷರ ನೆಲೆಲಿ ನಾಲ್ಕ್ ಮಾತ್ ಬರ್ದ್ ಪ್ರೋತ್ಸಾಹ ನೀಡೆಲೊ. ಪುಸ್ತಕ ಪ್ರಕಟಣಾ ಸಮಿತಿಯ ಸಂಚಾಲಕ ಶ್ರೀ ಎ.ಕೆ. ಹಿಮಕರ ಇವು ಈ ಕಥಾಜೊಂಗೆನ ಒಳ್ಳೆ ಅಂಶಗಳ ಹೇಳೆಲೊ. ಕುಸಾಲ್, ತಮಾಸೆ, ವಿಡಂಬನೆ ಚಿಂತನೆ, ಕಳಕಳಿ ಎಲ್ಲವೂ ಇವರ ಕಥೆಗಳ್‌ಲಿ ಉಟ್ಟು ಅಂತ ಬರ್ದಳೊ. ಒಟ್ಟು 79+10=89 ಪುಟ ಇರುವ ಈ ಕತೆ ಪುಸ್ತಕಲಿ ಒಟ್ಟು 26 ಕತೆಗ ಒಳೊ. ಹೆಚ್ಚಿನ ಎಲ್ಲಾ ಕತೆಗಳ ಹೆಸ್‌ರೇ ತಮಾಷೆ ಆಗಿ ಉಟ್ಟು. ಹಳ್ಳಿಗಲ್ಲಿ ನಡೆವ ಬೇರೆ ಬೇರೆ ಸಂಗತಿಗಳ ಕತೆ ರೂಪಲಿ ಬಾರಿ ಲಾಯಿಕ್ ಮಾಡಿ ಬರ್ದಳೊ. ನಗರಲಿ ಜನರ ಬೊದ್ಕು ಹೇಂಗಿದ್ದದೆ ಎಂಬ ಕಲ್ಪನೆನೂ ಇವರ ಕತೆಗಳ್‌ಲಿ ಉಟ್ಟು.'ಕುಞ ಮೋನುನ ಚಾಮಿ', 'ಪುಂಡುನ ಗೂಡೆ ಪದ್ರಡ್ ಗಡ', 'ಪುಟನ್ ಮಾದವಣ್ಣ', 'ಪಾಚುನ ಪ್ರೇಮ ಪ್ರಸಂಗ' ಹಿಂಗೆ ಎಲ್ಲಾ ಕತೆಗಳ್‌ಲಿ ಲಘು ಹಾಸ್ಯ ಉಟ್ಟು. ಲೇಖಕರೇ ಹೇಳುವಾಂಗೆ ಈ ಕತೆ ಪುಸ್ತಕಗಳ್‌ಲಿ ಇರುವ ಕತೆಗ, ಕತ್ತಲೆ ಒಳಗೆ ಮಾಯ ಆಗಿ ಹೋದದರ ಮತ್ತೆ ತೋರ್ಸುವ "ಮಿಣ್ಪುಳಿ' ನಾಂಗೆ. ಮರ್ತ್ ಹೋದ ಸಬ್ದಗಳ ವಾಪಾಸ್ ಪರ್ಚಯಿಸಿ, ಕಳ್ದ್ ಹೋದ ಕತೆಗಳ ಪುನ ನೆಂಪಿಸಿ ಅರೆಬಾಸೆನ ಒಳ್ಳಿ ಬೆಳ್ಸುವ ಕಳಕಳಿ 'ಮಿಣ್ಪುಳಿ' ಕತೆ ಪುಸ್ತಕಲಿ ಎದ್ದ್ ಕಂಡದೆ.

## 11. ತಬ್ಲಿ ಮಂಜ :

ಅರೆಬಾಸೆಲಿ ಪುಟ್ಟಣ್ಣ ಗೌಡ ಅಂಬೆಕಲ್ (ಪಿ.ಜಿ.ಅಂಬೆಕಲ್) ಬರ್ದ 'ತಬ್ಲಿ ಮಂಜ' ಒಂದು ಒಳ್ಳೆ ಕತೆ ಪುಸ್ತಕ. ಇದರ ಕೆಲವು ಕತೆಗೆ ಒಂದು ಜೀವನ ಚರಿತ್ರೆ ರೀತಿಲಿ ಕಂಡದೆ. ಸುಳ್ಯ-ಕೊಡಗು ಪ್ರದೇಶಗಳ ಜನಜೀವನ, ಸಾಮಾಜಿಕ ವ್ಯವಸ್ಥೆ ಗೊತ್ತಿದ್ದವುಕೆ ಇವರ ಕತೆಗ ಬಾರಿ ಮಜಾ ಕೊಡ್ದು. ಯಾಕಂತೇಳ್ರೆ ಕಣ್ಣಿಗೆ ಕಟ್ಟುವಂಗೆ ಕೆಲವು ಸನ್ನಿವೇಶಗಳ ರಸವತ್ತಾಗಿ ಬರ್ದೊಳೊ. ಮಡಿಕೇರಿ ಹತ್ರದ ಚೆಟ್ಟಳ್ಳಿ ಹೈಸ್ಕೂಲ್‌ಲಿ ಮುಖ್ಯ ಶಿಕ್ಷಕರಾಗಿ ಸೇವೆ ಮಾಡಿ 2002ರ್‌ಲಿ ರಿಟೈರ್ಡ್ ಆದವು.ಅರೆಬಾಸೆ ಅಕಾಡೆಮಿಯವು 2019ರ್ಲಿ ಪ್ರಕಟ ಮಾಡ್ದ ಈ ಕತೆ ಪುಸ್ತಕಲಿ ಒಟ್ಟು 12 ಕತೆಗ ಒಳೊ. ಇದರ್ಲಿ 93+10=103 ಪುಟ ಉಟ್ಟು. ಅಂದ್‌ನ ಅಧ್ಯಕ್ಷರಾಗಿದ್ದ ಪಿ.ಸಿ. ಜಯರಾಮ ಇವ್ ಅಧ್ಯಕ್ಷರ ನೆಲೆಲಿ ನಾಲ್ಕ್ ಮಾತ್‌ಗಳ ಬರ್ದ್ ಶುಭ ಹಾರೈಸೆಲೊ. ಪುಸ್ತಕ ಪ್ರಕಟನಾ ಸಮಿತಿ ಸಂಚಾಲಕ ಶ್ರೀ ಎ.ಕೆ. ಹಿಮಕರವು ಕತೆಗಳ ಸಾರಾಂಶನ ಎರಡ್ ಮಾತ್‌ಗಳ್‌ಲಿ ಬರ್ದೊಳೊ. ಶ್ರೀ ಬಾರಿಯಂಡ ಜೋಯಪ್ಪ ಇವು ಮುನ್ನುಡಿ ಬರ್ದೊಳೊ.

ಕತೆ ಪುಸ್ತಕದ 'ತಬ್ಲಿಮಂಜ' ಕತೆ ಒಂದು ಭಾವನೆನ ಸೃಷ್ಟಿ ಮಾಡ್ದೆ. ಸ್ವಾಭಿಮಾನಿ ಅವ್ವ ಹೂವಮ್ಮ ಮಂಜನ ಓದ್ಸಿದ ರೀತಿ, ಹೂವಮ್ಮನ ತ್ಯಾಗ, ಧೈರ್ಯ ಇವೆಲ್ಲ ಮನಸ್ಸ್‌ನ ಮೆದು ಮಾಡ್ದೆ. ಮಂಜ ಕೆಲಸಕ್ಕೆ ಸೇರ್ದಗಳಿಗೆ ಕಣ್ಣಂಚಿಲಿ ನೀರ್ ತಂದದೆ. 'ಕೂಡ್ಸು-ಕಳಿವ' ಆಟ ಕತೇಲಿ ಕುರುಬರ ಹೈದ ಮಾಡ್ದ ಹಳ್ಳಿ ಮೊದ್ದು, ಅಜ್ಜಿನ ಪೆದ್ದೊಳ್ಳಿ ಸಾಕಣೆ, ಮಳೆಗಾಲದ ಭೀಕರತೆ ಇದರೆಲ್ಲ ಬಾರೀ ಲಾಯಿಕ್‌ಲಿ ಬರ್ದೊಳೊ. 'ಆಹುತಿ' ಕತೆಲಿ ಸತ್ಯ ಸುಳ್ಳುಗಳ ಪರಾಂಬರಿಸಿ ನೋಡುವ ನೀತಿ ಪಾಠ ಉಟ್ಟು. 'ಆಸ್ಪತ್ರೆ ಹಾಸಿಗೆಲಿ' ಕತೆ ಕ್ಯಾನ್ಸರ್ ಬಂದ ಪೊನ್ನಮ್ಮನ ಸಮಾಧಾನ ಮಾಡುವ ಗಂಡನ ಬುದ್ಧಿವಂತಿಕೆ ಮಾದರಿ ಆಗಿ ಉಟ್ಟು. ಏಡ್ಸ್ ಬಗ್ಗೆ ಜಾಗ್ರತೆನೂ ಹೇಳೆಳೊ. 'ಬೆತ್ತ ಕುಣೀತ್ತಿತ್' ಕತೆ ಅಂದ್‌ನ ಮಾಸ್ತ್ರಗಳಿಗೆ ಇದ್ದ ಸ್ವಾತಂತ್ರನ ಬಗ್ಗೆ ತಿಳ್ಸಿದೆ. ಅದೇ ಇಂದ್ ಕೈಲಿ ಬೆತ್ತ ಇದ್ದರೆ ಮಾಸ್ತ್ರ ಸಸ್ಪೆಂಡ್ ಮಾಡುವೆ. ಸಣ್ಣದಿರ್‌ಕನ ಗಣಿತ ಮಾಸ್ಟ್ರ ಮಗ್ಗಿ ಬರದಕ್ಕೆ ಕೈಗೆ ಅಡಿಕೋಲ್‌ಲಿ ಪೆಟ್ಟ್ ಕೊಟ್ಟ ನೆನಪಾದೆ. ಮಕ್ಕಳ ಪೋಕ್ರಿತನಗ ಕಣ್ಣಿಗೆ ಕಟ್ಟುವಂಗೆ ಬರ್ದಳೊ. 'ಜೋಮಾಲೆ' ಕತೆ ಹೆತ್ತವು ಮಕ್ಕಳಿಗಾಗಿ ಪಡುವ ಕಷ್ಟಗಳ ತಿಳ್ಸಿದೆ. 'ಕರಿಕೂಟ ಕತ್ತಲೆಲಿ ಮಿಂಚಿದ ಮಿಂಚ್' ಕತೆ ಒಳ್ಳೆದಕ್ಕೆ ಹಠ ಮಾಡಿರೆ ಒಳ್ಳೆದೇ ಆದೇಂತೇಳುವ ಅಂಶ ತಿಳ್ದ್ ಬಂದದೆ. 'ಗುರುದಕ್ಷಿಣೆ' ಕತೆಲಿ ಕೆಳಹಂತದ ಅಧಿಕಾರಿಲಿರುವ ಕೀಳ್ತನ, ಮೇಲಾಧಿಕಾರಿಲಿರುವ ಮೇಲ್ತನನ ಬೊಟ್ಟು ಮಾಡಿ ತೋರ್ಸೆಳೊ. ಜೊತೆಗೆ ಮಾಸ್ತ್ರ ಕಷ್ಟನೂ ಮನದಟ್ಟು ಮಾಡೆಳೊ. ವರ್ಗಾವಣೆನ ಬವಣೆಗಳನೂ ಈ ಕತೆಲಿ ಹೇಳೆಳೊ.

## 12. ಅಪ್ಪ ಹೇಳ್‌ದ ಹತ್ತ್ ಕತೆಗ :

ಭವಾನಿಶಂಕರ್ ಅಡ್ತಲೆಯವು ಬರ್ದ 'ಅಪ್ಪ ಹೇಳ್ದ ಹತ್ತ್ ಕತೆಗ' ಪುಸ್ತಕನ 2019ರ್ಲಿ ಅರೆಬಾಸೆ ಅಕಾಡೆಮಿಯವು ಪ್ರಕಟಮಾಡ್ದೊ. ಇದರ್ಲಿ 45 ಪುಟಗ ಇದ್ದ್ 10 ಕತೆಗಳ ಜೊಂಪೆನ ಅರೆಬಾಸೆ ಪ್ರೇಮಿಗಳಿಗೆ ಕೊಟ್ಟೊಳೊ. ಈ ಪುಸ್ತಕಕ್ಕೆ ಎ.ಕೆ.ಹಿಮಕರ ಇವು ಮುನ್ನುಡಿ ಬರ್ದೊಳೆ.ಇವು ಕನ್ನಡ ಮತ್ತೆ ಅರೆಬಾಸೆಲಿ ಬುಡಾದೆ ಬರೆತಾ ಇರುವ ಕೆಲವೇ ಜನ ಸಾಹಿತಿಗಳ್‌ಲಿ ಒಬ್ಬ. ಸುದ್ದಿ ಪತ್ರಿಕೆಲಿ 'ಮನೆಚಿಂಟೆಲಿ' ತೇಳುವ ವಿಭಾಗಲಿ ಲೇಖನಗ ಬರ್ದ್ ಅರೆಬಾಸೆ ಓದುಗರಿಗೆ ಚಿರಪರಿಚಿತ ಬರಹಗಾರ ಆದೊ. ಈ ಕತೆ ಪುಸ್ತಕನ ನಾಲ್ಕ್ ಸತ್ಯ ಕತೆಗಳ ಆರ್ ಜನಪದ ಕತೆಗಳ ಸೇರ್ಸಿ ಮಾಡೆಳೊ. ಇಲ್ಲಿರುವ ಸತ್ಯಕತೆಗಳ ಪಾತ್ರಗ ಪ್ರತಿ ಓದುಗನ ಕಣ್ಣಮುಂದೆ ಬಂದ್ ನಿಂತವೆ.ಇದರ್ಲಿ ಸುರೂನ ಕತೆ ದೆವ್ವದ ಹರ್ಕೆ. ಇದೊಂದ್ ಸತ್ಯಕತೆ. ಎರ್ಡ್ನೆ ಕತೆ 'ಶೇಷಣ್ಣ, ಆನೆ ಬಾತ್' ಇದ್ ಸಹ ಒಂದು

ಸತ್ಯಕತೆನೆ. ಮೂರ್ನೆ ಸತ್ಯಕತೆ 'ದೊಡ್ಡ ಉಗ್ಗಪ್ಪಂಗೆ ಕುಡೋಳ್ ಕಚ್ಚಿದ್'. ನಾಲ್ಕನೇ ಸತ್ಯಕತೆ 'ಹುಲಿ ಅಜ್ಜ'. ಇನ್ ಉಳ್ದವು ಜಾನಪದ ಕತೆಗೆ ಅದರ್ಲಿ 'ತಟಪಟ ಹನಿಯಪ್ಪ', 'ಬೆದ್‌ರ್ ಪಾಯಾಸ', 'ಮರದ ಚೆಟ್ಟೆ', 'ಚಿನ್ನದ ಪೆಟ್ಟಿಗೆ', 'ಆಳಕ್ಕಿ– ಆಳು+ಹಕ್ಕಿ' ಮತ್ತು 'ಮೂಡು ಬಾಳೆ ಒಟ್ಟಿಗೆ ಗೈಪ್ ಮಾಡ್ಬೇಡಿ' ಕತೆಗಳ ಬರ್ದೊಳೊ.

## 13. ಅಪೂರ್ವ ಸಂಗಮ :

ಕಟ್ರತನ ಲಲಿತಾ ಅಯ್ಯಣ್ಣ ಇವು ಬರ್ದ 'ಅಪೂರ್ವ ಸಂಗಮ' ಕತೆ ಪುಸ್ತಕನ ಅರೆಬಾಸೆ ಅಕಾಡೆಮಿಯವು 2019ರ್ಲಿ ಪ್ರಕಟಮಾಡ್ದೊ. ಒಟ್ಟ್ 103 ಪುಟಗ ಇರುವ ಈ ಪುಸ್ತಕಲಿ 10 ಕತೆಗ ಇದ್ದ್ ಬಾರಿಯಂಡ ಜೋಯಪ್ಪನವು ಮುನ್ನುಡಿ ಬರ್ದೊಳೊ. ಅವರ ಎಲ್ಲಾ ಕಥೆಗಳ್‌ಲಿಯೂ ಸಂಸಾರ, ಕುಟುಂಬ, ಬೊದ್ಕ್‌ನಂತ ವಿಚಾರಗ ಎದ್ದ್‌ಕಂಡವೆ. ಕತೆಗಳ್‌ಲಿ ಕುತೂಹಲ ಹುಟ್ಟಿಸುವ ಕಲೆಗಾರಿಕೆ ಉಟ್ಟು. ಇವು ಅರೆಬಾಸೆ ಅಕಾಡೆಮಿಯಿಂದ ಹೊರಬರುವ 'ಹಿಂಗಾರ' ಪತ್ರಿಕೆಲಿ ಕೆಲವು ಕತೆಗಳ ಪ್ರಕಟ ಮಾಡೆಳೊ. ಓದು, ಕುಟುಂಬ, ಉದ್ಯೋಗ, ಅಪ್ಪ ಅಮ್ಮನವರ ಚಾಕ್‌ರಿ ಇದೆಲ್ಲ ಇವರ ಕತೆಗಳ್‌ಲಿ ಪ್ರಸ್ತಾಪ ಆಗುವ ವಿಷಯಗ. ಸುರೂನ ಕತೆ 'ಅಪೂರ್ವ ಸಂಗಮ'ಲಿ ಹೆಣ್ಣ್‌ನ ಹೋರಾಟ, ಗಂಡ್‌ನ ಅಸಾಯ ಕತೆಗಳ ಓದುಗರ ಮನಮುಟ್ಟುವಂಗೆ ಬರ್ದೊಳೊ. 'ಮಿಂಚಿದ ಕಾಲ' ಒಂದು ಕರುಣಾಜನಕ ಕತೆ. 'ಅರಿವು ಮೂಡಿತ್ತ್' ಈ ಪುಸ್ತಕದ ಕಡೇ ಕತೆ. ಜೀವನದ ಆದರ್ಶ, ಸೋಲು–ಗೆಲುವು, ಪ್ರತೀಕಾರ ಸೇಡ್ ಇದೆಲ್ಲ ಸನ್ನಿವೇಶ ನಿರ್ಮಾಣ ಮಾಡುವ ವಿಷಗ ಎನ್ನುವ ರೀತಿಲಿ ನಿರೂಪಣೆ ಮಾಡೆಳೊ. ಇವರ ಎಲ್ಲಾ ಕತೆಗಳೂ ಕೊನೆವರೆಗೂ ಕುತೂಹಲನ ಕೆರಳಿಸಿಕೊಂಡೇ ಹೋಗುವ ಕಾರಣ ಒಂದು ಕತೆ ಓದಿ ಆದ ಮೇಲೆ ಇನ್ನೊಂದು ಕತೆನೂ ಓದಮತ್ತೇಳಿ ಮನಸ್ಸಾದೆ.

ಲೇಖಕರು

**ಡಾ. ಪುರುಷೋತ್ತಮ ಕೆ.ವಿ ಕರಂಗಲ್ಲು**

ಪುಸ್ತಕ ವಿಮರ್ಶೆ

# ಅರೆಬಾಸೆ (ಗೌಡ ಕನ್ನಡ) ವ್ಯಾಕರಣ



ಪ್ರೊ॥ ಕೋಡಿ ಕುಶಾಲಪ್ಪ ಗೌಡನವು ಕೊಡಗು ಜಿಲ್ಲೆನ ಮಡಿಕೇರಿ ತಾಲೂಕು ಪೆರಾಜೆ ಕೋಡಿ ಮನೆತನದವು. ಮದರಾಸು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಪ್ರಾಧ್ಯಾಪಕ–ಮುಖ್ಯಸ್ಥರಾಗಿದ್ದ್, ಈಗ ನಿವೃತ್ತರಾಗೊಳೊ. ತಮ್ಮ ನಿವೃತ್ತ ಜೀವನನ ಸುಳ್ಯದ ಜಟ್ಟಿಪಳ್ಳಲಿರುವ ಅವರ 'ಮಾನಸ' ಮನೆಲಿ ಕಳಿತಾ ಒಳೊ. ಅವ್ ಕನ್ನಡ ಪ್ರಾಧ್ಯಾಪಕ, ಸಾಹಿತಿ, ಭಾಷಾ ವಿಜ್ಞಾನಿ, ಕವಿ, ಸೃಜನಶೀಲ ಬರಹಗಾರ, ಸಂಶೋಧಕ ಹಿಂಗೆ ಹಲವಾರ್ ಕ್ಷೇತ್ರಗಳ್‌ಲಿ ಪರಿಣತರ್. ಕನ್ನಡ ಮತ್ತೆ ಇಂಗ್ಲಿಷ್‌ಲಿ ಸುಮಾರ್ ಪುಸ್ತಕ ಬರ್ದ ಅವ್ 2014 ರ್‌ಲಿ ಅವರ ಅವ್ವ ಬಾಸೆ (ಗೌಡ ಕನ್ನಡ)ಲಿ 'ಮಾನಸ ಮಹಾಭಾರತ'ತ್ತೇಳ್ವ ಗದ್ಯ ಕಾವ್ಯನ ಬರ್ದೊಳೊ.

ಪ್ರೊ॥ ಗೌಡರ್ ತಮ್ಮ ತಾಯ್ನುಡಿಯ ಕುರ್ತ್ ಸುರೂಗೆ ಬರ್ದ ಪುಸ್ತಕ "ಗೌಡ ಕನ್ನಡ"ತ್ತೇಳ್ವ ಸಂಶೋಧನ ಕೃತಿ. ಅದರ ತಮಿಳುನಾಡ್‌ನ ಅಣ್ಣಾಮಲೈ ವಿ.ವಿ. 1970ರ್‌ಲಿ ಪ್ರಕಟ ಮಾಡ್ತ್. ಅದ್ ಆಧುನಿಕ ಭಾಷಾ ವಿಜ್ಞಾನ ತತ್ವಗಳ್‌ನ ಅನುಸರಿಸಿಕಂಡ್ ಇಂಗ್ಲೀಷ್‌ಲಿ ಬರ್ದ ಪುಸ್ತಕ. ಅದೇ ಪುಸ್ತಕದ ಮುಂದೊರ್ದ ಭಾಗನೇ ಈಗ ಪ್ರಕಟ ಆದ ಅರೆಬಾಸೆ (ಗೌಡ ಕನ್ನಡ) ವ್ಯಾಕರಣತ್ತೇಳ್ವ ಪುಸ್ತಕ. ಇದರ 2019ರ್‌ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಮಡಿಕೇರಿ ಪ್ರಕಟಿಸುಟು.

ಸಾಮಾನ್ಯಾಗಿ ಪ್ರಧಾನ ಬಾಸೆಗಳ ಕುರ್ತ್ ನಡೆವಷ್ಟು ಅಧ್ಯಯನಗ ಉಪಬಾಸೆ (Dialect) ಗಳ ಬಗೆಗೆ ನಡೆತಿಲ್ಲೆ. ಎಲ್ಲೊ, ಕೆಲ ಆಡುನುಡಿಗಳ ಕುರ್ತ್ ಅಲ್ಲೊಂದ್ ಇಲ್ಲೊಂದ್‌ತ್ತೇಳುವಷ್ಟ್ ನಡ್ದುಟಾದರೂ ಸಮಗ್ರ ಆಗಿ ಆಕೆ ತುಂಬಾ ಉಟ್ಟು. ಕನ್ನಡಲೂ ಹಂಗೇ. ದ್ರಾವಿಡ ಭಾಷಾವರ್ಗಕ್ಕೆ ಸೇರ್ದ ತಮಿಳು, ತೆಲುಗು, ಮಲಯಾಳ, ತುಳು ಹಿಂಗೆ ಕೆಲವ್ ಅಧ್ಯಯನಗ, ಪದಕೋಶಗ, ವ್ಯಾಕರಣ ಗ್ರಂಥಗ, ಸಾಹಿತ್ಯ ಚರಿತ್ರೆಗ, ಶಾಸನಗ, ಕೆಲವ್ ಬಂದೊಳೊ. ಈ ಭಾಷೆಗಳಿಗೆ ಸಂಬಂಧಪಟ್ಟಂಗೆ

ಎಷ್ಟೋ ಉಪಭಾಷೆಗಳ ಕುರ್ತ್ ನಡ್ದ ಅಧ್ಯಯನಗ ಅಷ್ಟಾಗೇನೂ ಕಾಂಬಲೆ.

ಕನ್ನಡದ ಹಳೇ ಉಪಭಾಷೆತೇಳ್ಸಿಕಂಡ್ ಹವ್ಯಕ ಕನ್ನಡ (ಹವಿಗನ್ನಡತ್ತೇಳಿ ಹೆಸ್ರಾಗಿರುವ) ಲಿ ಈ ನಿಟ್ಟ್‌ಲಿ ಕೆಲವೊಂದ್ ಅಧ್ಯಯನಗ ನಡ್ದದ್ ಕಂಡ್‌ಬಂದದೆ. ಈ ಬಾಸೆಲಿ 1887ರ್‌ಲಿ ಪೂರ್ಣ ಪ್ರಮಾಣಲಿ ಸೃಜನಶೀಲ ಸಾಹಿತ್ಯ ಕೃತಿಯ ರಚನೆ ಆಗುಟು. 20ನೇ ಶತಮಾನದ ಉತ್ತರಾರ್ಧಲಿ ಕೆಲಮಂದಿ ವಿದ್ವಾಂಸರ್ ಈ ಉಪ ಭಾಷೆಯ ಕುರ್ತ್ ಅಧ್ಯಯನ ನಡ್ಸಿಯೊಳೊ. ಭಾಷೆ-ವ್ಯಾಕರಣಗಳ ಕುರ್ತ್ ಹೇಳ್ದುತಾದರೆ, ಹವಿಗನ್ನಡ ನುಡಿಯ ಕುರ್ತ್ 1971 ರ್‌ಲಿ ಪಿಹೆಚ್.ಡಿ. ಸಂಶೋಧನೆನ ನಡ್ಸಿದ ಡಾ. ಕೆ.ಜಿ. ಶಾಸ್ತ್ರಿಯವರ The Havyaka Dialect of North Kanara ಎಂಬ ಕೃತಿ, 1972ರ್‌ಲಿ ಪ್ರೊ॥ ತಾಳ್ತಜೆ ಕೇಶವ ಭಟ್ಟರ್, 'ಪದ ಸಂಚಯ'ತ್ತೇಳ್ವ ಕೃತಿನ ರಚನೆ ಮಾಡ್ಯೊಳೊ. ಇದರ್ಲಿ ಈ ನುಡಿಯ ಕುರ್ತ್ ವ್ಯಾಕರಣ, ಪದ ಸಂಪತ್ತುಗಳ್ನ ಕಂದ ಪದ್ಯಗಳ್‌ಲಿ 'ಶಬ್ದ ಮಣಿದರ್ಪಣ'ದ ಮಾದರಿಲಿ ರಚಿಸಿಯೊಳೊ. ಹಂಗೆನೆ, ಡಾ. ಡಿ.ಎನ್. ಶಂಕರಭಟ್ಟರ್, ಪ್ರೊ॥ ಮರಿಯಪ್ಪ ಭಟ್ಟರ್, ವಿದ್ವಾನ್ ತಿಮ್ಮಪ್ಪ ಕಲಸೆ, ಡಾ. ಚಂದ್ರಶೇಖರ ಭಟ್ಟರ್, ಡಾ. ಹರಿಕೃಷ್ಣ ಭರಣ್ಯ, ಡಾ. ಶ್ರೀ ಕೃಷ್ಣ ಭಟ್ ಅರ್ತಿಕಜೆ, ಡಾ. ಉಪ್ಪಂಗಳ ರಾಮಭಟ್, ಡಾ. ಹೆಲೆನ್ ಉಲ್‌ರಿಚ್, ಪ್ರೊ. ಪ್ರಮೋದ ಪಾಂಡೆ ಹಿಂಗೆ ಕೆಲವ್ ಭಾಷಾಧ್ಯಯನ ಮಾಡಿಯೊಳೊ. ಅಷ್ಟೇ ಅಲ್ಲ ಸಾಹಿತ್ಯ, ಜಾನಪದ, ಇತ್ಯಾದಿಯಾಗಿ ಪಿಹೆಚ್.ಡಿ. ಪ್ರಬಂಧಗ ಲೇಖನಗ ಬಂದೊಳೊ.

ಇದೇ ರೀತಿಯ ಆಸಕ್ತಿ ಕನ್ನಡದ್ದೇ ಉಪ ಭಾಷೆಯಾದ ಗೌಡ ಕನ್ನಡಲಿ ಈಚೆಗೆ ಸಣ್ಣ ರೀತಿಲಿ ನಡೆತಿರ್ದು ಕಂಡುಬರುತ್ತುಟ್ಟುತ್ತೇಳ್ದು ಕುತೂಹಲದ ಸಂಗತಿ. 1970 ರ್‌ಲಿ ಪ್ರೊ. ಕೋಡಿಯವು Gowda Kannada ತ್ತೇಳ್ವ ಸಂಶೋಧನ ಕೃತಿನ ಪ್ರಕಟಿಸಿಯೊಳೊ. ಕೆಲವ್ ಲೇಖನಗ ಬಂದೊಳೊ. ಇದೀಗ ಪ್ರೊ॥ ಗೌಡರ ಅರೆಬಾಸೆ (ಗೌಡ ಕನ್ನಡ) ವ್ಯಾಕರಣ ಹೊರ ಬಂದುಟು.

ಈ ಪುಸ್ತಕಲಿ ಒಟ್ಟು 132 ಪುಟಗ ಇದ್ದ್, 16 ಅಧ್ಯಾಯಗ ಒಳೊ. ಇದರ ಮುನ್ನುಡಿಲಿ ಪ್ರೊ॥ ಗೌಡರ್ ಅರೆಬಾಸೆಯ ಅಸ್ತಿತ್ವ, ಆ ಬಾಸೆನ ಮಾತಾಡ್ವ ಗೌಡ ಜನಾಂಗದ ಪರಿಚಯಗಳ ಕೊಡಕನ ಗೌಡ ಜನಾಂಗದ ಎಲ್ಲವೂ ಈ ಬಾಸೆನ ಮಾತಾಡ್ಲೆ. ಒಂದ್ ನಿರ್ದಿಷ್ಟ ವಲಯದೊಳಗೆನ ಕೆಲವಷ್ಟೇ ಅವ್ವ ಭಾಷೆನ ಮಾತಾಡ್ವೆತ ಹೇಳಿಯೊಳೊ. ಈ ಜನಾಂಗದವು ಕ್ರಿ.ಶ. ಸುಮಾರ್ 15ನೇ ಶತಮಾನಂದ ಐಗೂರು ಸೀಮೆನ ಘಟ್ಟ ಇಳ್ದ್ ಬಂದ್, ಕೆಲವ್ ದ.ಕನ್ನಡಕ್ಕೂ, ಇನ್ನ್ ಕೆಲವ್ ಪಂಗಡಗ ಕೊಡಗಿಗೂ ಬಂದ್ ನೆಲೆಯಾಗಿರ್‌ವೊತ್ತೇಳಿ ದಾಖಲಿಸಿಯೊಳೊ.

ಅರೆಬಾಸೆ ಕುರ್ತ್ "ಈ ಕನ್ನಡದ ಪ್ರಭೇದವು ಉತ್ತರ ದ್ರಾವಿಡ ಗುಂಪಿನ ಬಾಹ್ವೀ ಭಾಷೆಯ ಸಮಾನಾಂತರ ಕಾಲದ (ಎಂದರೆ, ಸಾಧಾರಣ ಹನ್ನೆರಡನೇ ಶತಮಾನದ) ಲಕ್ಷಣವನ್ನು ತೋರಿಸುತ್ತದೆ"ತ್ತೇಳ್ವ, ಅವರ ಸಿನೇತ, ಇನ್ನೊಬ್ಬ ಭಾಷಾವಿದ್ವಾಂಸ ಡಾ. ಎಸ್.ವಿ. ಷಣ್ಮುಗಂ (ಅಣ್ಣಾಮಲೈ ವಿ.ವಿ.) ಅವರ ಮಾತ್‌ನ ಸಮರ್ಥಿಸುವೆ. (ಪು.6) ಒಟ್ಟಿಗೆ, ಈ ನುಡಿಯು ಶಿಷ್ಟ ಕನ್ನಡ ಸ್ವರೂಪಕ್ಕೆ ಹೋಲತಿದ್ದ್, ಕೆಲ ಪದಗ ಹಳಗನ್ನಡ ಸ್ವರೂಪನೂ ತೋರಿಸಿವೆತ ಉದಾಹರಣೆಗಳ ಸಮೇತ ವಿವರಿಸಿವೆ. ಇದ್ಕೆ 'ಅರೆಬಾಸೆ'ತ ವಿಶೇಷ ಹೆಸ್ರ್ ಬಾಕೆ ಏನ್ ಕಾರಣ ಇರ್ದುತ್ತೇಳ್ದುಕೆ ಕೆಲ ವಿಚಾರಗಳ ಒದಗಿಸಿವೆ. ಈ ನುಡಿಯ ಬಗ್ಗೆ ಅವರ ಪ್ರೀತಿ, ಅಭಿಮಾನ ಮತ್ತೆ ಕಳಕಳಿಗಳ ಪ್ರೊ॥ ಗೌಡರ್, "ಎಲ್ಲಾ ಕಾಲಕ್ಕೂ ಉಳಿಯೊಕು, ಎಲ್ಲವ್ಕೂ ಗೊತ್ತಾಕುತ್ತೇಳ್ವ ಆಸೆಂದ, ಸರಳವಾದ ಈ ಬಾಸೆಗೆ ಒಂದ್ ವ್ಯಾಕರಣನ ರಚ್‌ಸಿ ನೀವಿಗೆ ಒಪ್ಪುಸೊಕುತ್ತೇಳ್ದು ನನ್ನಾಸೆ"ತ ಹೇಳಿಯೊಳೊ.

*

ಈ ಕೃತಿಗೆ ಲೇಖಕರ್ ಬರ್ದ ದೀರ್ಘ ಆದ ಪ್ರಸ್ತಾವನೆಲಿ ಬಾಸೆಯ ಉಗಮ, ವಿಕಾಸ, ಅದರ ಅಗತ್ಯ, ಬಾಸೆಗಳ ಬೇರೆ ಬೇರೆ ವರ್ಗ, ಅವರವರ ಅಗತ್ಯಕ್ಕೆ ತಕ್ಕಂಗೆ ಅವೇ ನಿರ್ಮಿಸಿಕಂಡ ಮಾತ್-ಇದೇ ಬಾಸೆತ್ತೇಳ್ದರ ಸರಿಯಾದ ತಿಳಿವಳಿಕೆಯೊಟ್ಟಿಗೆ ಸರಳವಾಗಿ ಕೊಡ್ತೊಳೊ. ಪ್ರಪಂಚದ ಕೆಲವ್ ಬಾಸೆಗ, ಅದರ್ನ ಅಧ್ಯಯನಕ್ಕೆ ಅನುಕೂಲ ಆಗುವಂಗೆ ಬಾಗ ಮಾಡ್ಕಂಡ ರೀತಿ; ಇಂಡೋ ಆರ್ಯನ್; ದ್ರಾವಿಡ ಬಾಸಾ ವರ್ಗಗ-ಹಿಂಗೆ ಸರಳ ಆಗಿ ತಿಳ್ಸಿವೆ. ಕನ್ನಡಲಿ ಈ ರೀತಿನ ಪ್ರಾದೇಶಿಕ ಪ್ರಭೇದಗ ಸಾವ್ರ ವರ್ಷಗಳ ಹಿಂದೆಂದಲೂ ಇದ್ದೊತ್ತೇಳಿ, ಕನ್ನಡ ನುಡಿಯ ಸ್ಥೂಲ ಚರಿತ್ರೆನ ಬಾಸಾ ಶಬ್ದಗಳ ಹೇಳ್ವ ಕ್ರಮದ ವಿಕಾಸನ ಸನ ಅವ್ ಹೇಳಿವೆ.

ಮನ್ಸನ ಬಾಯಿಯ ಬೇರೆ ಬೇರೆ ಬಿಂದುಗಳ್‌ಂದ ನಾಲಿಗೆಗಾಗಿ ಉತ್ಪತ್ತಿ ಆಗುವ ಮಾತ್‌ನ ತುಣುಕುಗಳ, ಸ್ವರಗ-ವ್ಯಂಜನಗ-ಹಿಂಗೆಲ್ಲಾ ವಿಂಗಡಿಸುವ ಪದ್ಧತಿ. ಹಿಂಗೆ ಸರಿಯಾದ ಶಬ್ದ ಮೂಲದ ಕುರ್ತ್ ವಿವರಿಸಿಯೊಳೊ. ತಮ್ಮ ಅಭಿಮಾನದ ಕನ್ನಡದ ವೈಯಾಕರಣಿಯಾದ ಕೇಶಿ ರಾಜನ ಸುಪ್ರಸಿದ್ಧವಾದ ಮಾತ್ 'ತನು ವಾದ್ಯಂ, ನಾಲಗೆ ವಾದನ ದಂಡಂ, ನುಡಿಸುವನಾತ್ಮನ್'...ತ್ತೇಳುದರ ಬಾರಿ ಪೊರ್ಲಾಗಿ ಸಮರ್ಥಿಸಿವೆ.

"ಮುಂದೆ, ಲಿಪಿಗ ಮತ್ತೆ ಲಿಪಿವ್ಯವಸ್ಥೆ ಬಗ್ಗೆ ವಿವರಿಸುವೆ. ಬಾಸೆಯ ಬೇಬೇರೆ ಸ್ತರಗಳ್‌ಂದ ಸ್ವರಗ/ವ್ಯಂಜನಗಳ ಮೂಲ ಉತ್ಪತ್ತಿ, ಅವು ಹುಟ್ಟುವ ರೀತಿ, ಅವುಗಳ ಬೇರೆ ಬೇರೆ ವಿಭಾಗಗ, ಅವುಗಳ ಒಳಗೆ ಇರುವ ವ್ಯತ್ಯಾಸಗ, ಪ್ರಪಂಚದ

ಬೇರೆ ಬಾಸೆಗಳ ವೈವಿಧ್ಯಗಳೊಟ್ಟಿಗೆ ತಿಳ್ಸಿವೆ.

"ದೇಶೀಯ ಬಾಸೆಗ ಎಷ್ಟೇ ಮೇಲ್ಮಟ್ಟದಿರ್‌ಲಿ, ವೈದಿಕರ ಕಾಮಾಲೆ ನೋಟಕ್ಕೆ ಅವೆಲ್ಲ 'ಅರೆ'ತ್ತೇಳ್ರೆ ಪೂರ್ತಿ ಅಲ್ಲದ ಬಾಸೆಗತ್ತೇಳುವ ಅವಗಣನೆಗೆ ಸಿಕ್ಕಿಕಂಡೊ"ತ್ತೇಳಿ ಹೇಳುವಲ್ಲಿರುವ ಅಪ್ರಿಯ ಸತ್ಯನ ಲೇಖಕರ್ ಇಲ್ಲಿ ಸ್ಪಷ್ಟಪಡಿಸಿವೆ. ಕನ್ನಡ ಆಗಲೀ, ಇತರ ಹೆಚ್ಚ್‌ನ ಬಾಸೆಗಳ ಪಂಡಿತರ್ ಸನ ಒಂದ್ ಕಾಲಲಿ ಅದೇ ರೀತಿ ವರ್ತನೆ ಮಾಡಿದ್ದೊತ್ತೇಳ್ದೂ ಸತ್ಯ ಆಗುಟು. ಈ ವಕ್ರದೃಷ್ಟಿಂದ ಸುರೂಗೆ ಹೊರಗೆ ನಿತ್ತ ದ್ರಾವಿಡ ಬಾಸೆತ್ತೇಳ್ರೆ ತಮಿಳೇತ್ತೇಳ್ದು ಒಂದ್ ಮಟ್ಟಿಗೆ ಸರಿ.

ಈಗ ವ್ಯಾಕರಣ ವಿವೇಚನಾ ಅಧ್ಯಯನ 'ಧ್ವನಿಮಾ' ವಿವೇಚನೆಂದ ಸುರುವಾದೆ. ಧ್ವನಿಮಾತ್ತೇಳ್ರೆ ಎಂತ? ಇದರ ವಿವರಿಸಿಕೆ, ಬರೆಕನ ಇಲ್ಲೆಲ್ಲಾ ಉಪಯೋಗ ಆಗುವ Phonetic Alphabet ನ ಬಳಕೆ ರೀತಿ, ಧ್ವನಿ, ಉಪಧ್ವನಿಗಳ ವಿಚಾರ, ವ್ಯಂಜನ ಮುಂತಾದ ವಿಚಾರಗಳ್ನ ಹೇಳಿವೆ. ಮುಂದೆ, ಸಂಧಿ, ನಾಮಪದ, ವಿಭಕ್ತಿಗ. ಹಿಂಗೆ ಒಂದೊಂದರ ವಿಶ್ಲೇಷಿಸಿಕಂಡ್ ಹೋಗೊಳೊ. ಅರೆಬಾಸೆಲಿ 7+1 ವಿಭಕ್ತಿಗ ಹೇಳಿಕಂಡ್,

"ಕೆಲ ಪಂಡಿತರ್ ಶಿಷ್ಟ ಕನ್ನಡಲಿ 'ಮರ ಬಿತ್ತು' ತ ಹೇಳ್ದರ ಬದ್ಲ್ 'ಮರವು ಬಿತ್ತು'ತ ಹೇಳ್ದುಟ್ಟು. ಹಿಂಗೆ ಮಾಡಿರೆ ಬಾಸೆನ ಸಹಜ ರೂಪಕ್ಕೆ ಅಪಚಾರ ಮಾಡ್ದಂಗೆ ಆದೆ" (ಪು.38) ತ ಹೇಳ್ಯೊಳೊ. ಹೊಸಗನ್ನಡಲ್ಲಾಗಲೀ, ಹವ್ಯಕ ಕನ್ನಡಲ್ಲಾಗಲೀ, ಇಂತದೇ ಪ್ರಯೋಗಗ ಸಹಜ ಆಗಿಯೇ ನಡ್ದದೆ. ಬಹುಶಃ ವ್ಯಾಕರಣ ಪಂಡಿತರೇ ಇಂತಾ ತಿದ್ದುಪಡಿನ ಮಾಡಿಕಂಡವೆತ್ತೇಳಕ್.

ಇಲ್ಲೆಲ್ಲಾ ಪ್ರೊ ಗೌಡರ್ ಬಾಸೆನ ಸಹಜತೆಯೇ ಅದರ ಸೊಗಡು, ನಿಜವಾದ ಮೂಲತ ಹೇಳ್ದ್ ತುಂಬಾ ಅರ್ಥಪೂರ್ಣ. ಅರೆಬಾಸೆಲಿನ ವಿಭಕ್ತಿ ಪ್ರಯೋಗಗಳ ವೈಶಿಷ್ಟ್ಯಗಳ ಒಟ್ಟಿಗೇ ಪಟ್ಟಿಮಾಡಿ ಉದಾಹರಣೆ ಮತ್ತೆ ವಿವರಗಳ ಕೊಟ್ಟವೆ. ಅವ್ ಉದಾಹರಣೆಗಳ ಕೊಡ್ಕನ ಹಳಗನ್ನಡ, ಹೊಸಗನ್ನಡ ಪ್ರಯೋಗಗಳೊಟ್ಟಿಗೆ ತೌಲನಿಕ ಆಗಿ ಕೊಟ್ಟದ್ದರ್‌ಂದ ಅಧ್ಯಯನ ಮಾಡವ್ಕೆ ಸುಲಭ ಆದೆ.

ಉದಾ:

ಹ.ಗ – ಬಂದಂ + ಅ = ಬಂದನಂ

ಕಂಡಳು + ಅಂ= ಕಂಡಳಂ

ಹೊ.ಗ – ಬಂದ+ಅವನು+ಅನ್ನು=ಬಂದವನನ್ನು

ಅರೆಬಾಸೆ – ಬಂದ+ಅಂವ+ನ= ಬಂದವನ (ಪು)

ಬಂದ+ ಅದ್+ರ = ಬಂದದರ (ಸ್ತ್ರೀ)

ಇತ್ಯಾದಿ.

ಮುಂದೆ ನಾಮಪದ, ಕ್ರಿಯಾಪದಗಳ್ನ ವಿವರ ಆಗಿ ಕೊಟ್ಟವೆ.

1. ಅಂವ ಹೈದ  2. ಅಂವ ಬಾತ್.

ಸರ್ವನಾಮಗ, ಅವುಗಳ ವೈವಿಧ್ಯ, ವಿಶೇಷತೆಗ, ಉತ್ತಮ, ಮಧ್ಯಮ ಪುರುಷ ಸರ್ವನಾಮಗಳೇ ಬಹುವಚನ ರೂಪ. ಪ್ರಶ್ನಾರ್ಥಕ ಸರ್ವನಾಮ, ವಿಶೇಷಣ ಮುಂತಾದ ವಿವರಣೆಗಳ ಕೊಟ್ಟವೆ. ಕ್ರಿಯಾಪದ ಅರೆಬಾಸೆಲಿ ಕಾಂಬ ವೈಶಿಷ್ಟ್ಯನ ವಿಶ್ಲೇಷಿಸಿವೆ.

ಕಾಲಗಳು – ನಾ – ಬನ್ನೆ / ಬಂದೆ / ಬಾವೆ

ಹಿಂಗೆನೇ, ನೀ, ನಾವು, ಗಳಿಗೂ ಕೊಟ್ಟವೆ.

ಅಪೂರ್ಣ ಕ್ರಿಯಾಪದ, ನಿಷೇಧ ಕ್ರಿಯಾಪದ, ಕಾಂಕ್ಷಿತ ಕ್ರಿಯಾಲೋಪ, ಆಶಯ ಕ್ರಿಯಾಪದ, ಪ್ರಥಮ ಬಹುವಚನ, ವಿದ್ಯರ್ಥಕ ಕ್ರಿಯೆ – ಇತ್ಯಾದಿ ಅನೇಕ ವ್ಯಾಕರಣ ಘಟಕಗಳ ಕುರ್ತ್ ಹೇಳಿವೆ.

ಅರ್ಥ ತುಣುಕುಗಲ್ಲಿ ಬಾವ ದರ್ಶನ ತುಣುಕು 'ಗಡಾರ್ಥಕ' – ಇದ್ ಹಳಗನ್ನಡ ಹಾಗೂ ಹವ್ಯಕ ಕನ್ನಡಗಲ್ಲಿ ಕಂಡ್‌ಬಾವಂತ ವಿಚಾರನ ಉದಾಹರಣೆ ಸಮೇತ ದಾಖಲಿಸಿಯೊಳೊ. ಕಡೇಲಿ ಧಾತು (ಮೂಲ) ರೂಪ ವ್ಯತ್ಯಯ – ವಿಚಾರಗಳ ವಿವರಿಸಿಯೊಳೊ.

ಈ ಪುಸ್ತಕದ ಕಡೆಲಿ ಸುಮಾರ್ ಎಪ್ಪತ್ತ್ ಪುಟಗಲ್ಲಿ ಗೌಡ ಕನ್ನಡದ ಮುಖ್ಯ ಪದ ಸಂಪತ್ತ್‌ನ  ಅಕಾರಾದಿಯಾಗಿ ಕೊಟ್ಟೊಳೊ. ಸುಮಾರ್ ಎರಡ್ ಸಾವ್ರಕ್ಕೂ ಜಾಸ್ತಿ ಪದಗಳಿಗೆ ಕನ್ನಡಲಿ ಅರ್ಥನ ಕೊಟ್ಟೊಳೊ. ಅರೆಬಾಸೆ ನಿಘಂಟ್ ರಚನೆ ಕೆಲ್ಸಕ್ಕೆ ಇದೊಂದ್ ಮುಖ್ಯ ಆದ ಆಕರ. ಆದರ್‌ಲಿ ಎರಡ್ ಮಾತಿಲ್ಲೆ.

ಇದರೊಟ್ಟಿಗೆ, ಒಬ್ಬ ಬಾಸಾ ಸಂಶೋಧಕಂಗೆ ಬಾಸೆಯ ಮೇಲೆನ ಪ್ರೀತಿ, ಅಭಿಮಾನ, ಕಾಳಜಿಗಳ ಪ್ರೊ| ಗೌಡರ್ ಒಂದ್ ಕಡೆ ಪಟ್ಟಿ ಮಾಡಿವೆ. ಬರೀ ಅರೆಬಾಸೆಗೆ ಮಾತ್ರ ಅಲ್ಲ, ಬಹುಶಃ ಹೆಚ್ಚಿನ ಎಲ್ಲಾ ಬಾಸಾಕ್ತರಿಗೂ ಈ ಸಲಹೆಗ ಅನ್ವಯ ಆದೆತ್ತೇಳ್ದರ ನೋಡಿ:

1. ಒಂದ್ ಪದ ಏನಾರ್ ಕಾಣೆಯಾದರೆ ಅದರ ಹಿಂದಕೆ ಪಡೆದಾಗಲೀ, ಅದರ ಬದಲ್ ಇನ್ನೊಂದ್ ಮಾಡ್ದಾಗಲೀ ಸಾಧ್ಯ ಇಲ್ಲೆ.
2. ಅವ್ವ ಬಾಸೆ ಬಗೆಗೆ ಆ ಮಾತಾಡವರ ಸಮೀಕ್ಷೆನ ನಡ್ಸೊಕು.
3. ಶಬ್ದಕೋಶದ ರಚನೆ ಆಕು.
4. ಸೃಜನಶೀಲ, ಶಾಸ್ತ್ರ ಗ್ರಂಥಗಳ ರಚನೆ
5. ಲಲಿತ ಕಲೆ ಇತ್ಯಾದಿ ರಚನೆ
6. ಅಗತ್ಯ ಇರುವ ಬೇರೆ ಲಿಪಿ ಸಂಜ್ಞೆಗಳ ಮಾಡಿಕಣೊಕು.
7. ಸಂಸ್ಕೃತಂದ ಬರುವ ಲಾಭ–ನಷ್ಟಗಳ ಗುರ್ತ್‌ಸೊಕು.
8. ನುಡಿಯ ಬೆಳವಣಿಗೆಗೆ ಸಹಕರ್ಸೊಕು. ತೊಂದರೆ ಬಾರದಂಗೆ ಎಚ್ಚರ

ವಹಿಸೊಕು.

9. ವ್ಯಾಕರಣ, ಅಲಂಕಾರ, ಕಾವ್ಯ ಮಿಮಾಂಸೆ–ಇದೆಲ್ಲಕೂ ಸಂಸ್ಕೃತನೇ ಮಾದರಿ ಆದ್.

ಅವು ಇವ್‌ಗಳೊಟ್ಟಿಗೆ, ಎರವಲು ಪದಗಳ ಬಗೆಗೆ

"ಎಷ್ಟೇ ಶ್ರೀಮಂತ ಬಾಸೆತೇಳ್ಕಂಡ್ರೂ, ಎರವಲು ಪದಗ ಅದಿಕೆ ಅನಿವಾರ್ಯ ಆಗಿ ಸೇರಿಕಂಡವೆ. ಸಂಸ್ಕೃತಕ್ಕೂ ಕನ್ನಡಂದ ಎಷ್ಟೋ ಪದಗ ಸೇರಿಕಂಡೊಳೊ"ತ ಹೇಳ್ಕಂಡ್, ಪ್ರಧಾನ ಬಾಸೆಯಿರ್‌ಲಿ, ಉಪಬಾಸೆಯಿರ್‌ಲಿ, ಅವುಗಳಿಗೆ ಅವ್‌ಗಳ್ದೇ ಆದ ಬುನಾದಿ, ಅಭಿವ್ಯಕ್ತಿ ಸಾಮರ್ಥ್ಯ, ಅರ್ಥವಂತಿಕೆ, ಸಂಸ್ಕೃತಿಯ ಹಿನ್ನೆಲೆ, ಇತ್ಯಾದಿ ಉಟ್ಟೇ ಉಟ್ಟು. ಅವುಗಳ್ನ ಯಾಗೊಳು ಕಡೆಗಣಿಸಿಕಾಗದ್‌ತ್ತೇಳುವ ಕಠಿಣ ಕಳಕಳಿನ ತೋರ್‍ಸೊಳೊ. ಅಷ್ಟೇ ಅಲ್ಲ, "ನನ್ನಂದ ಕೈಲಾದ ಅಳಿಲ ಸೇವೆನ ನನ್ನ ಇಳಿ ವಯಸ್ಸಿಲಿ(88) ಮಾಡಿಯೊಳೆ"ತ್ತೇಳಿ ಅಭಿಮಾನಂದ ಹೇಳಿಕಂಡಳೊ.

*

ಯಾವ್ದೇ ಬಾಸೆಲಿ ಜನಪದ, ಮತ್ತೆ ಸೃಜನಶೀಲ ಸಾಹಿತ್ಯ ರಚನೆಗ ಜಾಸ್ತಿ ಬಂದರಷ್ಟೇ ಅದದ್ ಬಾಸೆನ ಸಂಪತ್ತ್, ಸೊಗಡು, ವೈಭವ, ತಾಕತ್ತ್‌ಗ ಬೊಳಿಗೆ ಬಂದವೆ. ಆ ದಿಕ್ಕ್‌ಲಿ ಅರೆಬಾಸೆಲಿ ಇನ್ನಷ್ಟ್ ಪುಷ್ಟಿಯಾದ ರಚನೆಗ ಬಾಕಾದೆ. ಆಗ ಬಾಸಾ ವ್ಯಾಕರಣ ಸಮಗ್ರ ಮತ್ತೆ ಸಂಪೂರ್ಣವೂ ಆದೆ.

ಈ ವ್ಯಾಕರಣ ಗ್ರಂಥದ ಮಿತಿ ಇದೇ ಆಗುಟು. ಏನಿದ್ದರೂ ಈ ಅರೆಬಾಸೆಯ ವ್ಯಾಕರಣ ಗ್ರಂಥ ಖಂಡಿತ ಆಗಿ ಅಮೂಲ್ಯ ಆದ ಅಧ್ಯಯನವೇ ಸರಿ. ಉಪ ಬಾಸೆಗಳ ಅಧ್ಯಯನಲಿ ಇದ್ಕೆ ಪ್ರತ್ಯೇಕ ಸ್ಥಾನ ಉಟ್ಟು. ಅರೆಬಾಸೆಯ ಮತ್ತೆ ಕನ್ನಡದ ವ್ಯಾಕರಣಾಸಕ್ತರಿಗೆ, ಬಾಸಾ ಸಂಶೋಧಕರಿಗೆ, ಸ್ವತಃ ಆ ಬಾಸೆ ಗೊತ್ತಿಲ್ಲದ ಆ ಜನಾಂಗದವ್ಕೂ ಇದೊಂದ್ ಕೈಪಿಡಿಯಾಗಿದ್ದದೆ. 88ರ ಈ ಮಾಗಿದ ವಯ್‌ಸ್‌ಲಿ, ಹಂಞಾ ಹಿಂಗದ ಪ್ರೊ॥ ಕೋಡಿಯವರ ಬಾಸಾಸಕ್ತಿ, ಅಧ್ಯಯನಶೀಲತೆ, ತುಂಬಾ ಮತ್ತೆ ಅಪರೂಪದ ಪಾಂಡಿತ್ಯ ಶ್ಲಾಘ್ಯ ಮತ್ತೆ ಅನುಕರಣೀಯ ಆಗುಟು. ಹಿಂಗೆ ಹೇಳಿ ಅವ್ಕೂ, ಈ ಅಮೂಲ್ಯ ಕೃತಿನ ಪ್ರಕಟ ಮಾಡ್ದ ಅರೆಭಾಷಾ ಅಕಾಡೆಮಿಗೂ ಅಭಿನಂದನೆಗ.

✍ ಡಾ. ಹರಿಕೃಷ್ಣ ಭರಣ್ಯ

ಅರೆಬಾಸೆಗೆ :

**ಬಾರಿಯಂಡ ಜೋಯಪ್ಪ**

ಅಡುಗೆ

# ಆಲೂಗೆಡ್ಡೆ ಬೋಂಡ

**ಬೇಕಾಗುವ ಸಾಮಾನ್‌ಗ :**

| | | |
|---|---|---|
| ಕಡ್ಲೆಹೊಡಿ | – | 250 ಗ್ರಾಂ |
| ಆಲೂಗೆಡ್ಡೆ | – | 150 ಗ್ರಾಂ |
| ಮೆಣ್‌ಸ್‌ಹೊಡಿ | – | 3 ಚಮಚ |
| ಈರುಳ್ಳಿ | – | 2 |
| ಸಾಸಿವೆ | – | 1 ಚಮಚ |
| ಎಣ್ಣೆ | – | 1/2 ಲೀಟರ್ |
| ಉಪ್ಪು | – | ರುಚಿಗೆ ತಕ್ಕಷ್ಟ |
| ಹಸಿಮೆಣ್‌ಸ್ | – | 4 |
| ಅರಿಶಿನ ಹೊಡಿ | – | 1/2 ಚಮನ |
| ಇಂಗು | – | 1 ಚಿಟ್‌ಕಿ |

**ಮಾಡುವ ಕ್ರಮ :**

ಸುರುಗೆ ಆಲೂಗೆಡ್ಡೆನ ಲಾಯಿಕ ತೊಳ್‌ದ್ ಬೇಸೋಕು. ನೀರುಳ್ಳಿನ ಸಣ್ಣ ಕತ್ತ್‌ರ್‌ಸಿಕಂಡ್ ಆಲೂಗೆಡ್ಡೆ ಬೆಂದ ಮ್ಯಾಲೆ ಅದರ ಸಿಪ್ಪೆನ ತೆಗ್‌ದ್ ಅದನ ಕೈಯಿಂದ ಗಿಮುಚಿ ಬೆಣ್ಣೆನಂಗೆ ಮಾಡಿಕೊಣೊಕು. ಅಲ್ಲಿಂದ ಬಾಣ್‌ಲ್‌ಲಿ 2 ಚಮಚ ಎಣ್ಣೆ ಹಾಕಿ ಒಲೆನ ಮ್ಯಾಲೆ ಮಡ್‌ಗೊಕು. ಎಣ್ಣೆ ಕಾದ ಮ್ಯಾಲೆ ಸ್ವಲ್ಪ ಅರ್‌ಶಿನ ಹೊಡಿನ ಹಾಕೊಕು. ಅಲ್ಲಿಂದ ಸಾಸ್‌ವೆನ ಹಾಕಿ ಎಣ್ಣೆ ಕಾದುಟ್ಟುತ ನೋಡೊಕು. ಎಣ್ಣೆ ಕಾದರೆ ಅಗ್ರಣೆ ಮಾಡೊಕು. ಅಲ್ಲಿಂದ ಈರುಳ್ಳಿನ ಹಾಕಿ ಅಗ್ರಣೆ ಮಾಡೋಕು. ಅಲ್ಲಿಂದ ಈರುಳ್ಳಿನ ಹಾಕಿ ಹುರಿಯೋಕು. ಈರುಳ್ಳಿ ಬೆಂದ ಮ್ಯಾಲೆ ಆಲೂಗೆಡ್ಡೆನ ಹಾಕೋಕು. ಈಗ ಅಲೂಗೆಡ್ಡೆ ಪಲ್ಯ ಆತ್. ಈಗ ಅದ್‌ನ ಸಣ್ಣ ಸಣ್ಣ ಉಂಡೆನಂಗೆ ಮಾಡಿಕೊಣೊಕು.

ಈಗ ಒಂದು ಪಾತ್ರೆಲಿ ಕಡ್‌ಲೆಹಿಟ್ಟ್‌ನ ಹಾಕಿ ಅದ್‌ಕೆ ಉಪ್ಪು, ಮೆಣ್‌ಸ್‌ನ ಹೊಡಿ ಹಂಗೆ ಇಂಗ್‌ನ ಹಾಕಿ ದೋಸೆನ ಬಂದನಂಗೆ ಕಲ್‌ಸೋಕು. ಅಲ್ಲಿಂದ ದೊಡ್ಡ ಬಾಣ್‌ಲ್‌ಲ್ಲಿ ಬೋಂಡ ಹೊರಿಯಕ್ಕೆ ಬೇಕಾಗುವಷ್ಟ್ ಎಣ್ಣೆ ಹಾಕಿ. ಎಣ್ಣೆ ಕಾದ ಮ್ಯಾಲೆ ಪಲ್ಯದ ಉಂಡೆನ ಹಿಟ್ಟ್‌ಲಿ ಹಾಕಿ ಕಾದ ಎಣ್ಣೆಗೆ ಹಾಕೋಕು. ಕೆಂಪಾಗಿ ಕಾದ ಮ್ಯಾಲೆ ಎಣ್ಣೆಂದ ಹೊರಗೆ ತಗಿಯೋಕು. ಈಗ ಇದನ ಸಾಸ್ ಇಲ್ಲಾರೆ ಚೆಟ್ನಿನೊಟ್ಟಿಗೆ ತಿಂದರೆ ಅದರ ರುಚಿನೇ ಬ್ಯಾರೆ.

✍ ಉಳುವಾರನ ರಾಣಿ ವಸಂತ್

# ಮನೆ ಮದ್ದ್

ಮಕ್ಕಳಿಗೆ ಕೆಮ್ಮಲು ಜೋರಾದರೆ ಕಪ್ಪು ತುಳಿಸಿದ್ ಕೊಡಿ ನಾಲ್ಕ್ ಐದ್ ತಕ್ಕಂಡ್ ಒಂದು ಎಸಳ್ ಬೆಳ್ಳುಳಿ, ಅರ್ಧ ಈರುಳ್ಳಿ, ಒಂದು ವೀಳ್ಯದೆಲೆ, ಒಂದು ಎರಡ್ ಒಳ್ಳೆ ಮೆಣಸ್ ಕಾಳ್ ಒಂದು ಚೂರ್ ಶುಂಠಿ ಇದೆಲ್ಲಾ ಸೇರಿಸಿ ಬಾಳೆ ಎಲೆ ಮೇಲೆ ಹಾಕಿ ಮಡಸಿ ಒಲೆ ಬೂದಿ ಒಳಗೆ ಹಾಕಕು. ಬಾಳೆಲೆ ಮೇಲೆ ಸ್ವಲ್ಪ ಕರಿಯಾದ ಮೇಲೆ ತೆಗ್ದ್ ಮಡಸಿ ಮಡಗಿದ್ ಬೆಂದಮೇಲೆ ಗುಂಡ್ ಕಲ್ಲ್ ತಕಂಡ್ ಕುಟ್ಟಿ ರಸ ತೆಗ್ದ್ ಆ ರಸಕೆ ಒಂದು ಚಂಚ ಜೇನು ತುಪ್ಪ ಹಾಕಿ ಮಕ್ಕಳಿಗೆ ಮೂರು ದಿನ ಕೊಡಿ. ಕೆಮ್ಮಲು ವಾಸಿ ಆದೆ.

## ದೊಡ್ಡಪತ್ರೆ ಮದ್ದು

ಮಕ್ಕಳಿಗೆ ಮೈಮೇಲೆ ಸಣ್ಣ ನುಚ್ಚುನಂಗೆ ಕಜ್ಜಿ ಬಂದದೆ, ಆಗ ಮಕ್ಕಳಿಗೆ ಜ್ವರನು ಬಂದದೆ. ದೊಡ್ಡ ಪತ್ರೆ ಸೊಪ್ಪುನ ಎಂಟ್ ಹತ್ತ್ ತಕಂಡ್ ಒಂದು ಚೂರ್ ಹಸಿ ಅರಿಸಿಣ ಹಾಕಿ ಅರ್‌ದ್ ಎರಡ್ ಚಂಚ ಮದ್ದುನ ಮಕ್ಕಳಿಗೆ ಕುಡ್ಸಿ ಮತ್ತೆ ಮೈ ತುಂಬಾ ತಿಕ್ಕಕು. ಒಂದು ದಿನಕೆ ಎರಡ್ ಸತಿ ಮೈ ತುಂಬಾ ಮದ್ದು ತಿಕ್ಕಕು. ಈ ಕಾಯಿಲೆ ಬಂದ ಮಕ್ಕಳ್ನ ಬಿಸಿಲಿಗೆ ಹೋಕೆ ಬುಡಿಕೆ ಆಗದ್. ಇನ್ನೊಂದು ತರದ ಕಾಯಿಲೆ ಬಂದದೆ. ಮಕ್ಕಳಿಗೆ ನೀರ್ ಕೊಟ್ಲೆತ. ಆ ಕಜ್ಜಿ ಚೂರಿ ಕಾಯಿ ಅಷ್ಟ್ ದಪ್ಪ ಬಂದದೆ. ಈ ಕಾಯಿಲೆ ಬಂದ ಮಕ್ಕಳಿಗೆ ಪಲಿ ಚೊಪ್ಪು ತುಂಬಾ ಸೊಪ್ಪು ತಂದ್ ಒಂದು ಕೊಂಬು ಹಸಿ ಅರಿಸಿಣ ಹಾಕಿ ಅರ್ದ್ ಕುಡಿಯಕೆ ಸ್ವಲ್ಪ ಕೊಡಕು. ಮೈ ತುಂಬಾ ತಿಕ್ಕಕು. ಇದೆ ತರಹ ಮೂರು ದಿನ ಕುಡಿಯಕೆ ಕೊಡಕು ಮೈ ತುಂಬಾ ತಿಕ್ಕಕು. ಈ ಕಾಯಿಲೆ ಬಂದವಕೆ ಬಿಸಿ ಊಟ ಕೊಡಿಕೆ ಆಗದ್. ತಣ್ಣಗೆ ಇದ್ದದ್ ಕುಡಿಯಕೆ ಕೊಡಕು ತಣ್ಣಗೆ ಇದ್ದದ್ ಊಟ ಕೊಡಕು. ಬಿಸಿಲಿಗೆ ಹೋಕೆ ಆಗದ್.

## ಸೋಂಕುನ ಮದ್ದು

ದೊಡ್ಡವಕೆ ಆಗಲಿ ಸಣ್ಣವಕೆ ಆಗಲಿ ಸೋಂಕು ಆದರೆ ಬಂದ ಜ್ವರ ಬುಡ್ದುಲೆ. ಆಗ ಅವರ ಕಣ್ಣ್ ಎಲ್ಲಾ ಕೆಂಪು ತರಹ ಬಂದದೆ. ಆಗ ನಾವು ಕೈ ಗರಗಸದ ಬಳ್ಳಿದ್ ಬೇರ್ ತಂದ್ ಲಾಯ್ಕಲಿ ತೊಳ್ದ್ ಬೇರ್‌ದ್ ತೊಪ್ಪೆ ತೆಗ್ದ್ ನಿಂಬೆ ಹಣ್ಣ್‌ನ ರಸಲಿ ಸಣ್ಣ ಅರೆಯಕು. ಸೋಂಕು ಆದರೆ ಆ ಮದ್ದು ಕೆಂಪು ಆದೆ.

ಆಗ ನಾವು ತಿಕ್ಕಣಕು ಸೋಂಕು ಆಗುಟುತ. ಇನ್ನ್ ಎರಡ್ ತರದ ಮದ್ದು ಉಟ್ಟು. ಬಿಳಿ ಸೊಮರದ ಕೆತ್ತೆ ಮತ್ತೆ ಕರಮಜಿ ಹಣ್ಣ್‌ನ ತಡೆದ್ ಕೆತ್ತೆ ಸಹ ಕೊಟ್ಟವೆ. ಹಿಂಗೆ ಮೂರು ತರದ ಮದ್ದು ಸೋಂಕುಗೆ ಉಟ್ಟು.

## ತಲೆಬೇನೆ, ಸೀತ

ಸಣ್ಣವುಕೆ ಆಗಲಿ ದೊಡ್ಡವಕೆ ಆಗಲಿ ತಲೆನೋವು ಸೀತ ಬಂದರೆ, ಮೂಕ್‌ಲಿ ನೀರ್ ಸೊರ್‌ದ್ದ್, ತಲೆ ಸಿಡಿತ ಹಿಂಗೆಲ್ಲಾ ಆಕನ ಮಂದದ್ದ ಕಾಸುಳಿನ ಹಣೆಗೆ ಲೇಪಹಾಕಿ ಮತ್ತೆ ಅದರ ಮೇಲೆ ತಿಂಬ ಸುಣ್ಣ ಹಾಕೊಕು. ಆಗ ಹಣೆ ಎಲ್ಲಾ ಬಿಸಿ ಬಿಸಿ ಆದೆ. ಮೂಕ್‌ಲಿ ಸೊರ್ದ ನೀರೆಲ್ಲಾ ಗಟ್ಟಿಯಾಗಿ ಹೋದೆ ತಲೆನೋವು ಕಡಿಮೆ ಆದೆ. ತೊಟಿಗ್ಲ್ ಮಕ್ಕಳಿಗೆ ಸೀತ ಆದರೆ ಕಬ್ಬಿಣದ ಓಡು ಕಾಸಿ ಅದಕೆ ಕುಂಕುಮನ ಹಾಕಿ ಬಿಸಿ ಕುಂಕುಮನ ತಲೆಗೆ ಮೂರು ದಿನ ಹಾಕಿರೆ ಶೀತ ಕಮ್ಮಿ ಆದೆ.

**✍ಕಾಳೆಯಡ ತಂಗಮ್ಮ ಅಪ್ಪಚ್ಚ**

## ಹಿಂಗಾರಕೆ ನೀವೂ ಬರೆನಿ

ಹಿಂಗಾರ ತ್ರೈಮಾಸಿಕ ಪತ್ರಿಕೆಗೆ ನೀವು ಕತೆ, ಪದ್ಯ, ಲೇಖನ, ಅಡುಗೆ, ಅನುಭವ, ಗಾದೆ, ಪದಕೋಶ ಇಂತದರೆಲ್ಲ ಬರ್ದ್ ಕಳ್ಸಿ. ಪ್ರಕಟಣೆಗೆ ಆಯ್ಕೆ ಆದ ಸಾಹಿತ್ಯನ ಪ್ರಕಟಿಸಿವೆ. ಹೊಸದಾಗಿ ಬರೆವು ಬರ್ದರ ಒಮ್ಮೆ, ಇಮ್ಮೆ, ಮತ್ತೊಮ್ಮೆ ಓದಿ ತಿದ್ದಿ ಬರೆನಿ. ಮನ್ಸಿಗೆ 'ಈಗ ಸರಿ ಆತ್'ತ ಆದ ಮೇಲೆ ಫುಲ್‌ಸ್ಕೇಪ್ ಹಾಳೆಲಿ 4 ಪುಟಕ್ಕೆ ಮೀರದಂಗೆ ಒಂದೇ ಕಡೆ ಬರೆನಿ. ಮಾರ್ಜಿನ್ ಬುಟ್ಟ್ ಬರೆನಿ. ಬರವಣಿಗೆ ನಿಮ್ಮ ಸೊಂತದ್ದಾಗಿರ್‌ಲಿ. ಅದೇ ಹಾಳೆಲಿ ನಿಮ್ಮ ಪೂರ್ತಿ ಹೆಸ್ರ್, ವಿಳಾಸ, ದೂರವಾಣಿ ಸಂಖ್ಯೆನ ಕಡ್ಡಾಯ ಆಗಿ ಬರೆನಿ.

ಹಿಂಗಾರದ ವಿಳಾಸ : **ಸಂಪಾದಕರ್**
ಹಿಂಗಾರ ತ್ರೈಮಾಸಿಕ ಪತ್ರಿಕೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ, ಮಡಿಕೇರಿ – 571 201
ಕೊಡಗು ಜಿಲ್ಲೆ
ಇ–ಮೇಲ್ : arebaseacademy@gamil.com
ವೆಬ್‌ಸೈಟ್ : www.arebhasheacademy.com
ದೂರವಾಣಿ : 08272 223055

# ಮನೆ ಮದ್ದ್‌ನ 'ಟಿಪ್ಸ್'

1. ಆರೋಗ್ಯದ ದೃಷ್ಟಿಂದ ಸಕ್ಕರೆಗಿಂತ ಬೆಲ್ಲ ತುಂಬಾ ಒಳ್ಳೆದ್.
2. ಅರಿಶಿಣ ಕ್ಯಾನ್ಸರ್‌ನ ವಾಸಿ ಮಾಡುವ ಗುಣನ ಹೊಂದಿಟ್ಟು
3. ಬೆಲ್ಲದ ಹಣ್ಣ್‌ನ ಪಾನಕ ಬಾಯಾರಿಕೆನ ಕಮ್ಮಿ ಮಾಡ್‌ದೆ
4. ಊಟಾದಂಗೆ ಬಾಳೆಹಣ್ಣ್‌ನ ತಿಂದರೆ ಜೀರ್ಣಕ್ರಿಯೆಗೆ ಒಳ್ಳೆದ್.
5. ಸೀಬೆ ಎಲೆಗಳ ಕಷಾಯ ಹಲ್ಲ್ ಮತ್ತೆ ವಸ್‌ಡ್‌ನ ಆರೋಗ್ಯಕ್ಕೆ ಒಳ್ಳೆದ್.
6. ಪೊಪ್ಪಾಯಿ ಹಣ್ಣ್ ಜೀರ್ಣಕ್ರಿಯೆಗೆ ತುಂಬಾ ಒಳ್ಳೆದ್
7. ನೆಲ್ಲಿಕಾಯಿ ರಕ್ತನ ಶುದ್ಧ ಮಾಡ್‌ದೆ.
8. ಬೇಸಿದ ಈರುಳ್ಳಿಗಿಂತ ಹಸಿ ಈರುಳ್ಳಿ ಆರೋಗ್ಯಕ್ಕೆ ಒಳ್ಳೆದ್.
9. ತಡಿನ ಕೊಲೆಸ್ಟ್ರಾಲ್ ಅಂಶನ ಬೆಳ್ಳುಳ್ಳಿ ಕಮ್ಮಿ ಮಾಡ್‌ದೆ.
10. ಮೊಸ್‌ರ್‌ಗಿಂತ ಮಜ್ಜಿಗೆ ಆರೋಗ್ಯಕ್ಕೆ ಒಳ್ಳೆದ್.
11. ಕಾಸಿದ ಹಾಲಿಗೆ ಸಕ್ಕರೆ ಹಾಕದೇ ಕುಡ್‌ದರೆ ಒಳ್ಳೆದ್
12. ಒಣ್‌ಗಿದ ಶುಂಠಿ ಹೊಡಿಂದ ಹಲ್ಲ್ ಉಜ್ಜಿರೆ ಬ್ಯಾನೆ ಕಮ್ಮಿ ಆದೆ.
13. ಹಸಿ ಮೂಲಂಗಿ ಮೂಲವ್ಯಾದಿ ಕಾಯಿಲಕ್ಕೆ ಒಳ್ಳೆ ಮದ್ದ್.
14. ಡಯಾಬಿಟಿಸ್ ಇರವುಕ್ಕೆ ಬಿಟೂರೂಟ್ ತುಂಬಾ ಒಳ್ಳೆದ್ದ್.
15. ಜೀರಿಗೆನ ಕಷಾಯ ಪಿತ್ತ ಕಾಯಿಲೆಗೆ ಒಳ್ಳೆದ್.
16. ದಾಳಿಂಬೆ ಹಣ್ಣ್‌ನ ತಿಂದರೆ ನೆಗ್‌ಡಿ, ಕೆಮ್ಮು ವಾಸಿ ಆದೆ
17. ಸೌತೆಕಾಯಿನ ಜಾಸ್ತಿ ಬಳ್‌ಸಿರೆ ಕುಡಿಯಕೆ ಆದುಲೆ
18. ಸಕ್ಕರೆ ಕಾಯಿಲಾ ಇರವುಕ್ಕೆ ರಾಗಿನ ಬಳ್‌ಕೆ ತುಂಬಾ ಒಳ್ಳೆದ್ದ್.
19. ಹಲ್‌ಸ್‌ನ ಹಣ್ಣ್‌ನ ಬೀಜ ನರಗಳ ಶಕ್ತಿನ ಜಾಸ್ತಿ ಮಾಡ್‌ದೆ.
20. ಪಡುವಲ ಕಾಯಿನ ಜಾಸ್ತಿ ತಿಂದರೆ ತಡಿನ ತೂಕ ಕಮ್ಮಿ ಆದೆ.
21. ಗೋರಿಕಾಯಿನ ಜಾಸ್ತಿ ಬಳ್‌ಸಿರೆ ಪಿತ್ತಕ್ಕೆ ಸಮ್ಮಂದಪಟ್ಟ ತಾಪತ್ರೆ ಬಾದುಲೆ.
22. ಹಾಗಲಕಾಯಿನ ಬಳ್‌ಸಿರೆ ರಕ್ತ ಶುದ್ಧಿ ಆದೆ. ಹಂಗೆ ಚರ್ಮ ಕಾಯಿಲಾ ವಾಸಿ ಆದೆ. ಇದ್ ಡಯಾಬಿಟೀಸ್‌ಗೆ ತುಂಬಾ ಒಳ್ಳೆ ಮದ್ದ್.
23. ವಾರಲ್ಲಿ ಮೂರು ದಿನ ತಲೆಗೆ ಹರಳೆಣ್ಣೆ ಹಾಕಿರೆ ನೆತ್ತಿ ತಂಪಾದೆ. ಹಂಗೆ ತಡಿಲ್ಲಿರುವ ಜಾಸ್ತಿ ಉಷ್ಣತೆ ಇಳ್‌ದದೆ.
24. ಬಾಣಂತಿಗಳ ಆರೋಗ್ಯಕ್ಕೆ ಸಬ್‌ಸಿಗೆ ಸೊಪ್ಪು ತುಂಬಾ ಒಳ್ಳೆದ್
25. ಹಲ್ಲ್‌ನ ಬ್ಯಾನೆಗೆ ಲವಂಗದ ಎಣ್ಣೆ ತುಂಬಾ ಒಳ್ಳೆದ್
26. ಅಜೀರ್ಣ ಆದರೆ ಪುದೀನ ಸೊಪ್ಪುನ ತಿನ್ನೋಕು
27. ಡಯಾಬಿಟೀಸ್ ಇರವು ನೇರಳೆ ಹಣ್ಣ್‌ನ ತಿಂದರೆ ತುಂಬಾ ಒಳ್ಳೆದ್.

✍ ಬೈಮನ ರೇಷ್ಮ

# ಒಡ್ಸೊ ಕತೆಗ

1. ಅಡಿ ಕಂಬ, ನಡು ಕಂಬ, ಕಡೆ ಕುಡಿಕೆ ಮೇಲೆ ಹುಲ್ಲು
2. ಎರಡ್ ಕೆರೆಗೆ ಒಂದೇ ಏರಿ.
3. ಕೆಳಗೆ ಗದ್ದೆಲಿ ನೀರ್, ಮೇಲೆ ಗದ್ದೆಲಿ ಬೆಳೆ ಬೆಳ್ದವೆ.
4. ಅಕ್ಕಂಗೆ ಆರ್ ಕಣ್ಣ್, ಮುಕ್ಕಂಗೆ ಮೂರ್ ಕಣ್ಣ್, ನನ್ನಂತ ಪಾಪಿಗೆ ಒಂದೇ ಕಣ್ಣ್.
5. ಅರಸು ಮಕ್ಕಳ ಅಂಗೈ ತೂತು
6. ಒಂದು ಕುಪ್ಪಿಲಿ ಎರಡ್ ತರದ ಮೊದ್ದು.
7. ಅವ್ವ ಪಾತಾಳಕ್ಕೆ, ಅಪ್ಪ ಆಕಾಶಕ್ಕೆ, ಮಂಜ ಸಂತೆಗೆ, ಮೊಗಳು ಮೊದ್ವೆಗೆ.
8. ಸಾಹುಕಾರ ಮುಂದೆ ಸಾವಿರ ಜನಗ ಹಿಂದೆ.
9. ಸತ್ತ ಎತ್ತ್ ಗುಟುರು ಹಾಕುದು.
10. ಆಯಿ ಹೋಯಿ ಮಣ್ಣೊಳಗೆ
11. ನನ್ನ ಹೊಟ್ಟೆ ಮೇಲೆ ನಿನ್ನ ಹೊಟ್ಟೆ
12. ಕೆಂಪಣ್ಣನ ಕಾಂಬಕಾಕನ ಬೆಳ್ಳವ್ವಂಗೆ ಹೆರಿಗೆ ಆದೆ (ಬಸಿರಿ ಆದೆ)
13. ಅಕ್ಕಂಗೆ ಹಾಕುಕಾಕನ ತಂಗೆಗೆ ತಲುಪಿದೆ.
14. ಹುಟ್ಟುಕಾಕನ ಒಂದೇ ಹೆಸ್ರು, ದೊಡ್ಡದಾದಂಗೆ ಬೇರೆ ಬೇರೆ ಹೆಸ್ರು.
15. ಅಂಗೈ ಅಗಲ ರೊಟ್ಟಿಗೆ ಸಾವಿರಾರು ಉಪ್ಪಿನಕಾಯಿ.
16. ಊರೆಲ್ಲಾ ಸುತ್ತಿದೆ. ಮನೆಗೆ ಬಂದರೆ ಒಂದ್ ಮೂಲೆಲಿ ಕುದ್ದದೆ.
17. ಕಾಡ್ ಕಡ್ದ್ ಕಲ್ಲ್ ಸಿಕ್ತ್, ಕಲ್ಲ್ ಕಡ್ದ್ ಬೆಳ್ಳಿ ಸಿಕ್ತ್. ಬೆಳ್ಳಿ ಕಡ್ದ್ ನೀರ್‌ಸಿಕ್ತ್.
18. ಆರ್ ದಾರ ಉಟ್ಟ್ ಹೀರೆ ಕಾಯಿ ಅಲ್ಲ, ಒಳಗೆ ಹುಳಿ ಉಟ್ಟು ಹುಣಸೆ ಹಣ್ಣ್ ಅಲ್ಲ. ಹಂಗಾರೆ ನಾನ್ಯಾರ್?
19. ಎಂಟು ಕಾಲು ಸೊಂಟ ಮುರುಕ, ನೆಂಟ್ರು ಬಂದರೆ ಒಳಗೆ ಹೊಕ್ಕಿದೆ.
20. ಒಂದು ಆನೆಗೆ ವರ್ಷಕ್ಕೆ ಒಂದೇ ಮೇವು.
21. ಕೆಂಪ್ ಮಡಿಕೆ ಒಳ್ಗೆ ಕರಿಮೆಣಸು
22. ಬೆಳ್ಳಂಗೆ ಉಟ್ಟ್ ಹಾಲಲ್ಲ. ಹುಳಿ ಉಟ್ಟು ಹುಣಸೆ ಹಣ್ಣ್ ಅಲ್ಲ. ಹಂಗಾರೆ ನಾನ್ ಯಾರ್?

23. ಮೂಡಂದ ಮುತ್ತೈದೆಗ ಬಂದವೆ, ಅವರನ್ನ ಎಣಿಸಕು ಬೇಕಾರೆ ಆದರೆ ನೆರಿಗೆನ ಎಣಿಸಿಕೆ ಆದ್ಲೆ.

24. ಅಂಕು ಡೊಂಕು ಶಂಖ ಪಾಳೆಗೆ ಮೂರ್ ತಲೆಗೆ ಹತ್ತ್ ಕಾಲುಗ.

25. ಬಿಳಿ ಹಾಳೆಲಿ ಕಪ್ಪು ದ್ರಾಕ್ಷೆ

26. ಒಳಗೆ ಹುಳಿವುಟ್ಟು ಹುಣಸೆ ಹಣ್ಣ್ ಅಲ್ಲ ಹಂಗಾರೆ ನಾನ್ಯಾರ್?

27. ಅಡ್ಡ ಮರಲಿ ಗುಡ್ಡೆ ಕುದ್ದುಟು, ಗುಡ್ಡೆ ಹಿಂಭಾಗಲಿ ಜಡ್ದು ಸುರಿತಾ ಉಟ್ಟು.

28. ಅಂತಪ್ಪನ ಹೆಣ್ಣ್ ಅಂತೈ ಜಾಣೆ ಕರೆದರೆ ಬಾಕಿಲ್ಲೆ ಕೈ ಮುಗಿಯೋಕು.

29. ಕಣ್ಣ್ ಕಾಣದ ಮುದುಕಿ ಪಾಲ ದಾಟಿದೆ.

30. ಕೊಡೆ ಕೊಟ್ಟೆ, ಕೋಲ್ ಕೊಟ್ಟೆ, ಅಂಬಟೆಕಾಯಿ ಆಸ್ತಿ ಕೊಟ್ಟೆ.

31. ತೊಳೂರು ಅಕ್ಕ ತೊಡೆಯಲಿ ಬಸಿರಿ, ಬಾಳೂರು ಅಕ್ಕ ಬಾಯಲಿ ಬಸಿರಿ ಬೆಳ್ಳೂರಕ್ಕ ಬೆನ್ನಲಿ ಬಸಿರಿ.

32. ದೊಡ್ಡವು ತೆಗ್ದ್ ಜೇಬಿಗೆ ಹಾಕುದು, ಬಡವು ತೆಗ್ದ್ ಬಿಸಾಡುದು.

33. ಅಣ್ಣ ಕೂತಿದ್ದದೆ. ತಮ್ಮ ಸುತ್ತಲೂ ತಿರುಗುತ್ತಾ ಇದ್ದದೆ.

34. ಮನೆ ಮೇಲೆ ಮನೆ ಕಟ್ಟಿ ಸಾಲಾಗಿ ಗುಡಿ ಹೊದ್ದು ಚಕ್ರದ ಬಯಲಲಿ ರಣ ಬಿದ್ದ್ ಓಡೋಣ ಈ ಕತೆ ಒಡೆದವುಕೆ ಅರುವತ್ತ್ ರೊಟ್ಟಿ ಆರ್ ಮಾನ ತುಪ್ಪ.

35. ನಾನೂರು ರೂಪಾಯಿ ಕೊಟ್ಟ್ ನಾನೊಂದ್ ಎತ್ತ್ ತಂದೆ, ಅದರ ಇನ್ನೂರು ರೂಪಾಯಿಗೆ ಮಾರ್‌ದೆ. ನಂಗೆ ನೂರು ರೂಪಾಯಿ ಲಾಭ ಬಾತ್ ಹೆಂಗೆ?

36. ಕುಪ್ಪಿ ಒಂದರಲಿ ತುಪ್ಪ ಎರಡ್ ಬಗೆ.

37. ಕರಿಯಣ್ಣ, ಕೆಂಪಣ್ಣ, ಬೊಳ್ಳುಕ ಈ ಮೂರ್ ಎತ್ತ್‌ಗಳನ್ನ ಹಟ್ಟಿಲಿ ಕೂಡಿದ್ದೆ. ಹೊತಾರೆ ನೋಡ್‌ಕಾಕನ ಕೆಂಪಣ್ಣ ಒಂದೇ ಉಳಿದದ್ದ್.

38. ಅಟ್ಟದ ಮೇಲೆ ಕೆಂಪಣ್ಣ ಕುದ್ದುಟು

39. ನನ್ನಪ್ಪ ಒಂದ್ ಬಿಳಿ ಎತ್ತ್ ತಂದೊಳೊ. ಆಳೆತ್ತರದ ಬೇಲಿ ಕಟ್ಟಿರೂ ಬೇಲಿ ಮೇಲೆ ಹಾರ್‌ದೆ.

40. ಶ್ಯಾನುಭೋಗರ ತೋಟ ನಲ್ವತ್ತೆಂಟ್ ಗೂಟಗ ಒಳಗೆ ಹುಕ್ಕುಕೆ ಆದೆ ಹೊರಗೆ ಬಂದವ ಇಲ್ಲೆ.

41. ಡಪ್ಪಂಗೆ ಬಿತ್ತ್ ಡುಪ್ಪಂಗಾಯಿ, ನೋಡಿದವ ಹೆಕ್ಕಿತ್ಲೆ ಮತ್ತೊಬ್ಬ ಹೆಕ್ಕಿತು, ಹೆಕ್ಕಿದವ ತೀತ್ಲೆ ಮತ್ತೊಬ್ಬ ತಿಂದತ್, ತಿಂದವ ಹೇತತ್ಲೆ, ಮತ್ತೊಬ್ಬ ಹೇತತ್.

42. ಅಡಿಲಿ ಪಾರೆ, ಮೇಲೆ ಪಾರೆ ಮಧ್ಯಲಿ ಪೀಸ್ ಪಾರೆ

43. ಅಂಗಡೀಲಿ ಮಾರ್‌ದುಲ್ಲೆ.. ತಕ್ಕಡಿಲಿಟ್ಟು ತೂಗುದುಲ್ಲೆ, ಅದಿಲ್ಲರೆ ಹಬ್ಬ ಕಳಿಯೋಕೆ ಆದುಲ್ಲೆ.

44. ಹಾಮಜಿ ಹಿಡ್ದ ಕಲ್ಲ್‌ಲಿ ಹಾರಾಡ್ದ್ ತಿಮ್ಮಪ್ಪ.

45. ತಟ್ಟಣ ಪಟ್ಟಣ ಅವನದ್ ಒಂದ್ ಚಹರೆ ಗುಂಡಣ್ಣ ಗುಂಡಪಣ್ಣ ಅವನದ್ ಒಂದ್ ಚಹರೆ ಹುಣ್ಣು ಮುಖದವನೊಂದ್ ಚಹರೆ.

46. ಹತ್ತು ತಲೆ ಕೆಂಪು ತಲೆ, ಆರು ತಲೆ ಕಪ್ಪು ತಲೆ.

47. ಒಂದ್ ಪುಂಡಿ ಕೆಸನ ಆರು ತಿಂಗ ಕೊಯ್ಯುದು

48. ಅಂಗಳದ ಮಧ್ಯೆಲಿ ಒಂದು ಗುಬ್ಬೆ ಸೆಗಣಿ.

## ಉತ್ತರಗ

1. ಮೊನ್ನ 2. ಕಣ್ಣ್ 3. ತಟ್ಟೆ ಇಡ್ಲಿ 4. ಸೂಜಿ 5. ಉಂಗುರ 6. ಕೋಳಿಮೊಟ್ಟೆ 7. ಅಡಿಕೆಮರ 8. ಬಾಳೆಗೊನೆ 9. ಕೋವಿ 10. ಶುಂಠಿ 11. ಬೀಸುವ ಕಲ್ಲ್ 12. ಅಕ್ಕಿರೊಟ್ಟಿ 13. ಒಲೆ ಮತ್ತೆ ಕಣ್ಣೊಲೆ 14. ಬಿದ್ರ್ 15. ಚಂದ್ರ–ನಕ್ಷತ್ರ 16. ಚಪ್ಪಲಿ 17. ತೆಂಗಿನಕಾಯಿ 18. ನೆಲ್ಲಿಕಾಯಿ 19. ಏಡಿ 20. ಹುಲ್ಲು ಮನೆ 21. ಪಪ್ಪಾಯಿ 22. ಸೇಂದಿ 23. ಅಳುಂಬೆ 24. ಊಳುದು ನೇಗಿಲು ಮತ್ತೆ ಮೊನ್ನ 25. ಕಣ್ಣ್ 26. ಕರ್ಮಣಂಜಿ ಹಣ್ಣ್ 27. ಹಲಸಿನ ಹಣ್ಣ್ 28. ಬೀಗ 29. ಜಿಗಣೆ 30. ಕೆಸುವಿನ ಗೆಡ್ಡೆ 31. ಕೆಸ, ಬಾಳೆ, ಬೈನೆ 32. ನೆಗಡಿ 33. ಬೀಸುವ ಕಲ್ಲ್ 34. ಜೇನ್ 35. ನೂರು ರೂಪಾಯಿಗೆ ಎತ್ತ್ 36. ಕೋಳಿವೊಟ್ಟೆ 37.ಎಲೆ, ಅಡಿಕೆ ಅಗಿದು 38. ಬಾಳೆಹಣ್ಣ್ 39. ಬೂದಿ 40. ಮೀನಿನ ಕೂಳಿ 41. ಹಣ್ಣ್‌ನ ತಿಂಬೋದು 42. ಆಮೆ 43. ಸೆಗಣಿ 44. ದೋಸೆ 45. ರೊಟ್ಟಿ ಕಡಂಬಿಟ್ಟ್ 46. ಬೆಂಕಿ 47. ಬೈನೆ ಕೊಂಬು 48. ಆಕಾಶಲಿ ಚಂದ್ರ.

✍ ಮೇಡ್ತನ ಮೋಹನ್ ಕುಮಾರ್

# ಗಾದೆ ಗಮ್ಮತ್ತ್

## (ಹಿಂದೆನ ಸಂಚಿಕೆಂದ)

434. ಒತ್ತಾಯಲಿ ದಾಸಯ್ಯಂಗೆ ಗಂಜಿಕೊಟ್ಟ್ ಭಟ್ಟ ಮೊರ್ಯಾದಿ ಕಳ್ಕಂಡ ಹಂಗೆ.
435. ಹಾವುನ ತಲೆಲಿ ಹಿಡ್ಕಂಡ್ ಕುರೆ ಬೊಬ್ಬೆ ಹೊಡ್ದಂಗೆ.
436. ಹದ್ದುನ ಕಣ್ಣ್ ಇದ್ದಂಗೆ.
437. ಬೇಡಿ ಹಾಕಿಟು ಹಕ್ಕ್‌ನ ಗುರುತು.
438. ಗೌರವಕೆ ಮುರು ಕುತ್ತಿಯೊಳು
439. ದಂಡ್ ಒಡ್ಡಿಟು ಅಂಕಕೆ ತಯಾರಾತ್.
440. ಪೀಚೆಕತ್ತಿ ಹಿಡ್ದುಟು ಯಾಗ ಕುತ್ತಿದೆಂತ ಗೊತ್ತಿಲ್ಲೆ.
441. ಹಂಗ್‌ನ ಊಟ ಯಾರಿಗೆ ಬೇಕು.
442. ಸಿಡಿಲಿ ಕಾಡುಕೋಳಿ ಸಿಕ್ಕಿದಂಗೆ
443. ಗಾಳಿಗೆ ಬುಟ್ಟ ಪರಿಮಳನ ಹಿಡ್ಯಕ್ಕಾದ.
444. ಇಂದ್ ಹೊತ್ತು ಒಳ್ಳ ಕಡೆ ಮೂಡಿಟು.
445. ಚುಕ್ಕಿದೆ ಹಂದಿ ಎಲ್ಲೆಂದರಲ್ಲಿ.
446. ಬೈರ ಮರ ಕ್ಯೊದಂಗೆ
447. ಯೇಮೆ ತಿಕಕ್ಕೆ ಬೆಂಕಿ ಕೊಟ್ಟಂಗೆ
448. ಅರ್ಚಿದೆ ಸಿಕ್ಕಿದಲ್ಲಿ ಮನಸ್ಸ್ ಬಂದಾಂಗೆ
449. ಪಾಲಲಿ ಹೋಗುವವಂಗೆ ಕೈತಾಂಗ್ ಇದ್ದಂಗೆ.
450. ಸೂಂತ್ರಿ ಇದ್ದಂಗೆ
451. ಏರಿಟು ಪಿತ್ತ ಸುದ್ದಿಗೆ ಹೋಬಡ.
452. ಮಾಡಿದ್ದ್ ಮುಗ್ಸಿರೆ ಎಂದಿಗೂ ಬೇಡ.
453. ನಾಯಿ ಬೀಲಕ್ಕೆ ಕೊಳ್ವೆ ಹಾಕಿದಂಗೆ.
454. ಕಣ್ಣ್ ಇದ್ದ್ ಕುರುಡು ಆತ್.
455. ಬುಡಕ್ಕೆ ಹೊಯ್ದುಟು ಬಿಸಿನೀರ್.
456. ಉಪ್ಪುಳುಕೆ ಸೊಪ್ಪುಲಿ ಒಟ್ಟೆ ತಪ್ಪಿಕಿಲ್ಲೆ.
457. ಆಂಕ್ರಿಕೆ ಕಾಡ್‌ಲಿ ಹೋಗಿ ಮೈ ಎಲ್ಲ ದಡರ್ ಮಾಡಿಕಾಂತ್
458. ಹಿಡ್ದುಟು ಮರಕ್ಕೆ ಬಂದನಿಕೆ ಹಿಡ್ದಂಗೆ

459. ಕಂಡದ್ದ್ ಕಂಡಾಂಗೆ ಹೇಳಿರೆ ಕೆಂಡದಂತ ಕೋಪ.
460. ತನ್ನ ಗುಂಡಿನ ತಾನೆ ತೋಡಿಕಾಂತ್.
461. ವಿನಾಸ ಕಾಲಕ್ಕೆ ವಿಪರೀತ ಬುದ್ಧಿ.
462. ಕಾಸಿಗೆ ಹೋದ ಮಾನ ಚಿನ್ನ ಕೊಟ್ಟರು ಸಿಗದ್.
463. ಕಪ್ಪೆ ಸಮುದ್ರಕೆ ಹೋದರೂ ಮೊಕ್ಕಾಲ್ ಮುಟ್ಟ ನೀರ್
464. ಹಾಕಿಟು ಮೊದ್ದು ಹೋಕೆ ದಿನ ಬಾತ್ಲೆ.
465. ನಾದಿನಿ ಗೂಡೆ ಕಾಲ್ ಹಿಡ್ಯಕನ ಮೈ ಎಲ್ಲ ಚಿಮ್ಮೆರಿತ್.
466. ಅಂದಾಜಿಗೆ ಗುಂಡು ಹೊಡ್ದ್ ತನ್ನ ಕಾರ್ಯ ಸಾಧಿಸಿತ್
467. ಮಕ್ಕ ಇಲ್ಲದವುಕೆ ಮಾಳಿಗೆ ಮನೆ ಯಾಕೆ.
468. ಎಲ್ಲ ಬುಟ್ಟ್ ಸಮುದ್ರಕೇ ಉಪ್ಪು ಹಾಕಿದೆ.
469. ನೀರ್‌ಲಿ ಮುಳುಗುವಂಗೆ ಕಲ್ಲ್ ಹೊತ್ತು ಹಾಕಿದಂಗೆ
470. ಗಾಣಲಿ ಎಣ್ಣೆ ಬಾಕನ ಹೆಣ್ಣ್‌ನೊಟ್ಟಿಗೆ ಹೋರಾಟಕ್ಕೆ ನಿತ್ತತ್.
471. ಚೌರಿಂಗ ತಲೆ ಬೊಳ್ಸಿದಂಗೆ
472. ನಾ ಹಿಡ್ದ ಮೊಲಕ್ಕೆ ಮೂರೇ ಕಾಲ್ ಅಂದದೆ
473. ಎಳ್ದದೆ ನಾಲಿಗೆ ಎಷ್ಟೂ ಉದ್ದ ಬಂದದೆ
474. ಅಡಿಕೆ ಕದ್ದ್ ಹೋದಮಾನ ಆನೆಕೊಟ್ಟರೂ ಸಿಗದ್
475. ದನ ಮಕ್ಕಳ ನೋಡ್‌ಕನ ಇದ್‌ರಂಟಿ ಹಕ್ಕಿ ಬೊಬ್ಬೆ ಹೊಡ್ದಂಗೆ
476. ಪೊಟ್ಟನ ಪೊಡಿ ಮೊದ್ದು ತಿಳ್ದಂವ ಇಲ್ಲೆ.
477. ಹೆಡ್ಡ ಮರ ಕಡ್ದಂಗೆ.
478. ಮರಕುಡ್ಕ ಹಕ್ಕಿ ಹೇಳ್ದಂಗೆ.
479. ಕೆನ್ನಾಯಿ ಗುಂಪಿಗೆ ಕಡ್ಡೆವೆ ಸಿಕ್ಕಿದಂಗೆ.
480. ಅಲ್ಪನ ಸಂಘ ಅಭಿಮಾನ ಭಂಗ.
481. ಕೂಸುನ ಆಶೆಲಿ ಮುಂಗ್ಲಿನ ತಲೆ ಕಡ್ತ್.
482. ಚಾಡಿಗೆ ತೂಕ ಜಾಸ್ತಿ.
483. ಮಂಥರೆನ ಮಾತಿಗೆ ರಾಮ ಕಾಡಿಗೆ ಹೋತು.
484. ಕಾದ ಓಡುಲಿ ನಡ್ದಂಗೆ
485. ಹುಟ್ಟಿದ ಜಾಗ ತಿರ್‍ಗಿ ನೋಡಂವ.

[ಮುಂದೆನ ಸಂಚಿಕೆಗೆ...]

✍ 'ಮಾಲಾಗಾ'

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷರ ಮತ್ತು ಸದಸ್ಯರ ವಿಳಾಸ :

ಅಧ್ಯಕ್ಷರು

**ಶ್ರೀ ಲಕ್ಷ್ಮೀ ನಾರಾಯಣ**

ಕನಕಮಜಲು ಅಂಚೆ, ಸುಳ್ಯ ತಾಲೂಕು, ದ.ಕ 574223

ಮೊ ನಂ 9449082249, kajegadde@gmail.com

ರಿಜಿಸ್ಟ್ರಾರ್

**ಶ್ರೀ ಚಿನ್ನಸ್ವಾಮಿ**

ಪಸಯ್ಯನಪುರ ಗ್ರಾಮ,

ಕಲೀಗೌಡನಹಳ್ಳಿ, ಗುಂಡ್ಲುಪೇಟೆ ತಾಲ್ಲೂಕು

ಚಾಮರಾಜನಗರ ಜಿಲ್ಲೆ

ಮೊ: 9945045327

ಅರ್ಥ ಸದಸ್ಯರು

**ಶ್ರೀಮತಿ ಕೆ.ಟಿ.ದರ್ಶನ**

ಸಹಾಯಕ ನಿರ್ದೇಶಕರು

ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಕೊಡಗು ಜಿಲ್ಲೆ, ಮಡಿಕೇರಿ

ಮೊ: 9483110593

ಸದಸ್ಯರು

**ಶ್ರೀಮತಿ ಜಾನಕಿ ಬೈತಡ್ಕ** #21-16. ರೇಸ್‌ಕೋರ್ಸ್ ರಸ್ತೆ,
ಎಲ್‌ಐಸಿ ಹತ್ತಿರ,ಮಡಿಕೇರಿ, ಕೊಡಗು.
ಮೊ ನಂ 9008571899

**ಶ್ರೀಮತಿ ಸ್ಮಿತಾ ಅಮೃತರಾಜ್** "ಹಸಿರು" ಬಾಲೆಂಬಿ ಅಂಚೆ ಚೆಂಬು ಗ್ರಾಮ
ಮಡಿಕೇರಿ ತಾಲೂಕು
ಮೊ ನಂ 9980402968

**ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ** ಟಿ.ಜಾನ್ ಲೇಔಟ್, ಶಕ್ತಿ ಕ್ವಾಟ್ರಸ್,
ಮಡಿಕೇರಿ, ಮೊ.ನಂ 9900992360

**ಶ್ರೀ ಎ.ಪಿ.ಧನಂಜಯ ಅಗೋಳಿಕಜೆ** 2ನೇ ಮೊಣ್ಣಂಗೇರಿ ಗ್ರಾಮ
ಮದೆ ಅಂಚೆ, ಮಡಿಕೇರಿ ತಾಲೂಕು
ಮೊ ನಂ 9449731238

**ಶ್ರೀ ಆನಂದ ದಂಬೆಕೋಡಿ** ಮೇಘಸಂದ್ಯೆ ಎಸ್ಟೇಟ್, ಕತ್ತಲೆಕಾಡು ಗ್ರಾಮ,
ಕಡಗದಾಳು ಅಂಚೆ, ಮಡಿಕೇರಿ ತಾಲೂಕು
ಮೊ ನಂ 9448141502

## ಲೇಖಕರ ಹೆಸ್ರ್ ಮತ್ತೆ ವಿಳಾಸ :

| | | |
|---|---|---|
| ಕಟ್ರತನ ಲಲಿತಾ ಅಯ್ಯಣ್ಣ | : | 'ಅನುಗ್ರಹ' ಗೌಳಿಬೀದಿ, ಮಡಿಕೇರಿ. ಮೊ : 7204675925 |
| ಕಾರ್ತಿ ಪದೇಲ | : | |
| ಭವ್ಯಶ್ರೀ ಕೆ.ಬಿ. | : | ಕರಂಗಲ್ಲು ಮನೆ, ದೇವಚಳ್ಳ ಗ್ರಾಮ, ಹರಿಹರ-ಪಲ್ಲತ್ತಡ್ಕ ಅಂಚೆ, ಸುಳ್ಯ ತಾಲೂಕು. ಮೊ : 9483890816 |
| ಕಡ್ಯದ ಪಾರ್ವತಿ ಕೃಷ್ಣಪ್ಪ | : | ಅವಂದೂರು. |
| ಎಂ.ಜಿ. ಕಾವೇರಮ್ಮ | : | "ನಿಸರ್ಗ" ಮಾವಜಿ, ಸುಳ್ಯ, ದ.ಕ. |
| ಅಂಬೆಕಲ್ಲು ಸುಶೀಲ ಕುಶಾಲಪ್ಪ | : | ವಿನೋದ್ ಮೆಡಿಕಲ್, ಮಡಿಕೇರಿ. |
| ಕುತ್ಯಾಳ ನಾಗಪ್ಪ ಗೌಡ(ಕಿರಣ) | : | ಕಿರಣ ಕುಟೀರ, ಸುಳ್ಯ – 574239 ಮೊ : 9448297221, 7618753221 kngkirana@gmail.com |
| ಸಂಗೀತ ರವಿರಾಜ್ | : | ಬಾಲಂಬಿ ಅಂಚೆ, ಚೆಂಬು ಗ್ರಾಮ, ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ –571201 |
| ಉದಯಕುಮಾರಿ | : | ಚೆಂಬು ಗ್ರಾಮ, ಬಾಲಂಬಿ ಅಂಚೆ, ಮಡಿಕೇರಿ ತಾಲ್ಲೂಕು, ಕೊಡಗು–571201 ಮೊ : 9632900436 |
| ಕಣಜಾಲ್ ಪೂವಯ್ಯ | : | ಚೆಟ್ಟಳ್ಳಿ, ಮೊ : 8762346750 |
| ಬೈತಡ್ಕ ಜಾನಕಿ ಬೆಳ್ಯಪ್ಪ | : | 21/16, ರೇಸ್‌ಕೋರ್ಸ್ ರಸ್ತೆ, ಎಲ್.ಐ.ಸಿ. ಕಛೇರಿ ಹತ್ತಿರ, ಮಡಿಕೇರಿ, ಕೊಡಗು ಜಿಲ್ಲೆ. ಮೊ : 9008571899 |
| ಕೀರ್ತನ ಕೊಡಪಾಲ | : | |
| ಚಿತ್ರಾ ಯತೀಂದ್ರ, ಹೊದ್ದೆಟ್ಟಿ | : | |
| ಯತಿಶ್ಯಾಂ, | : | ಕುಂಬಳಚೇರಿ ಮನೆ, ಪೆರಾಜೆ ಗ್ರಾಮ |
| ಸಹನಾ ಗಿರೀಶ್ | | ಸಹಶಿಕ್ಷಕಿ, ವಿದ್ಯಾಬೋಧಿನೀ ಪ್ರೌಢಶಾಲೆ, ಬಾಳಿಲ, ಸುಳ್ಯ ದ.ಕ.ಮೊ : 9482622656 |
| ದೀಪಿಕಾ ಸುದರ್ಶನ್ | : | ಕುಸುಬೂರು ಗ್ರಾಮ ಮತ್ತು ಅಂಚೆ, |
| | : | ಸೋಮವಾರಪೇಟೆ ತಾಲ್ಲೂಕು, |
| | : | ಕೊಡಗು ಜಿಲ್ಲೆ–571236 ಮೊ:9481058791 |
| ಮೇರ್‌ಕಜೆ ಲೋಹಿತ್ ಸೋಮಯ್ಯ | : | ಮುತ್ತಾರ್‌ಮುಡಿ ಗ್ರಾಮ, ವೇಣಿ ನಿಲಯ ಮೂರ್ನಾಡು, ಮಡಿಕೇರಿ ತಾಲ್ಲೂಕು ಕೊಡಗು ಮೊ : 9980777704 |

| | | |
|---|---|---|
| ಶಿವದೇವಿ ಅವನೀಶ ಚಂದ್ರ | : | ಸುಳ್ಯಕೋಡಿ ಮೊ : 9900278269 |
| ವಿಶ್ವನಾಥ್ ಎಡಿಕೇರಿ | : | ಮನೆ ಸಂಖ್ಯೆ: 4/63, 7ನೇ ಕ್ರಾಸ್, (ಸ್ಟೆಂಟ್ ಪೀಟರ್ ಚರ್ಚ್ ಹತ್ತಿರ, ಬೃಂದಾವನ ನಗರ, ಮತ್ತಿಕೆರೆ ಅಂಚೆ, ಬೆಂಗಳೂರು–560054, ಮೊ : 6360349938 |
| 'ವ್ಯಾಸ' | : | ಕುಂಞೇಟಿ ಶಿವರಾಮಗೌಡ ಕೊಲ್ಲಮೊಗ್ರ – 574218 ಸುಳ್ಯ ತಾಲೂಕು, ದ.ಕ. ಮೊ : 8762121694 |
| ಮಾಲಗೌ | : | ಯಂ. ಲಕ್ಷ್ಮಣಗೌಡ, ಮ್ಯಾಪುನ ಮನೆ, ಅಂಚೆ–ಮಡಪ್ಪಾಡಿ ಸುಳ್ಯ, ದ. ಕನ್ನಡ 574218 ಮೊ : 9483923310 |
| ಭವಾನಿ ಶಂಕರ್ ಹೊದ್ದೆಟ್ಟಿ | : | ಬೆಂಗಳೂರು. |
| ಎಸ್.ಕೆ. ಈಶ್ವರಿ | : | ಮೇಕೇರಿ ಗ್ರಾಮ,ಕಗ್ಗೋಡ್ಲು ಅಂಚೆ, ಮಡಿಕೇರಿ. ಮೊ : 9481370263 |
| ಉಮೇಶ ಬಿಳಿಮಲೆ | : | ಕಲ್ಮಕಾರು ಮೊ : 9483460659 |
| ಡಾ॥ ಕಾವೇರಿಮನೆ ಬೋಜಪ್ಪ | : | ಆರ್.ಟಿ. ನಗರ, ಬೆಂಗಳೂರು–32 ಮೊ : 9738450971, 080–23334111 |
| ಪ್ರಜ್ಞಾ ವಿ.ಪಿ. | : | ಪ್ರಥಮ ಬಿ.ಕಾಂ. ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸುಳ್ಯ. ವಾಡ್ಯಪ್ಪನ ಮನೆ, ನಾಲ್ಕೂರು ಗ್ರಾಮ, ಗುತ್ತಿಗಾರು, ಸುಳ್ಯ |
| ಡಾ. ಪುರುಷೋತ್ತಮ ಕೆ.ವಿ | : | ಕರಂಗಲ್ಲು 'ಚಾಣಕ್ಯ' ಸರಕಾರಿ ಪ್ರಥಮ ದರ್ಜೆ ಕಾಲೇಜು ಮುಂಭಾಗ, ಗಾಂಧೀನಗರ, ಕಾವೂರು, ಮಂಗಳೂರು, ದ.ಕ–575015. |
| ಡಾ. ಹರಿಕೃಷ್ಣ ಭರಣ್ಯ | : | ವಿಶ್ರಾಂತ ಕನ್ನಡ ಪ್ರಾಧ್ಯಾಪಕ 'ಬನಶಂಕರಿ' ನಾರಾಯಣ ಮಂಗಲ ಅಂಚೆ ಕುಂಬಳೆ – 671321 ಮೊಬೈಲ್ : 9448216070 |
| ಉಳುವಾರನ ರಾಣಿ ವಸಂತ್ | : | ಕಾಂತೂರು–ಮೂರ್ನಾಡ್ ಮೊ : 9611554193 |
| ಕಾಳೆಯಂಡ ತಂಗಮ್ಮ ಅಪ್ಪಚ್ಚ | : | ಬಿಳಿಗೇರಿ, ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ – 571201 |
| ಬೈಮನ ರೇಷ್ಮ | : | ಕೊಟ್ಟೂರು ಗ್ರಾಮ, ಚೇರಂಬಾಣೆ, ಮಡಿಕೇರಿ. ಮೊ : 9448213231 |
| ಮೇಡ್ತನ ಮೋಹನ್ ಕುಮಾರ್ | : | ಭದ್ರಗೊಳ ಗ್ರಾಮ ಮತ್ತು ಅಂಚೆ, ತಾರಿಕಟ್ಟೆ, ತಿತಿಮತಿ. |

# ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ

2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ

3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ

4 ಕುಂಕುಮ : ಪೂಜಾರೀರ ಜಿ. ಮಾದಪ್ಪ

5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು

6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ

7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ

8 ತೋರಣ : ಬಾರಿಯಂಡ ಆರ್. ಜೋಯಪ್ಪ

9 ಬೊಲ್ಪು : ಲೋಕೇಶ್ ಕುಂಚಡ್ಕ

10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ

11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ

12 ಹೊಸ ಬೊಡ್ಕ್ : ಉದಯಕುಮಾರಿ, ಚೆಂಬು.

13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ

14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ

15 ಅನುಭವಧಾರೆ : ಹೊದ್ದೆಟ್ಟಿ ಭವಾನಿಶಂಕರ

16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.

17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.

18 ಬದುಕು : ಎಂ.ಜಿ.ಕಾವೇರಮ್ಮ

19 ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ

20 ಕಾಡ್‌ನ ಮಕ್ಕ : ಕೆ.ಆರ್.ತೇಜ ಕುಮಾರ್

21 ಅಪ್ಪ ಹೇಳ್ದ ಹತ್ತ್ ಕತೆಗ : ಭವಾನಿ ಶಂಕರ್ ಅಡ್ತಲೆ

22 ನಗೆ ಬೇಕ್ ಕೇದಗೆ ಗೊನೆ ಹಾಂಗೆ: ಡಾ॥ ಕರುಣಾಕರ ನಿಡಂಜಿ

23 ತಬ್ಲಿ ಮಂಜ : ಪಿ.ಜಿ.ಅಂಬೆಕಲ್

24 ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು

25 ಅರೆಬಾಸೆ ವ್ಯಾಕರಣ : ಪ್ರೊ. ಕೆ. ಕುಶಾಲಪ್ಪ ಗೌಡ

**HINGARA** **Arebhashe Quarterly** Volume **-3**, Issue **-12**

Date : **31.12.2019 Kodagu** KARARB/2016/69571 Price : **20/-** Pages : **84**



ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವರ್ ಬೆಂಗಳೂರ್ಲಿ ಕರ್ದ ಸಭೆಲಿ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಹೊಸ ಅಧ್ಯಕ್ಷರ್ ಮತ್ತೆ ಸದಸ್ಯರ್‌ಗ



ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವರಾದ ಶ್ರೀ ಸಿ.ಟಿ. ರವಿ ರವರೊಟ್ಟಿಗೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಹೊಸ ಅಧ್ಯಕ್ಷರ್ ಮತ್ತೆ ಸದಸ್ಯರ್‌ಗ

Ptd@Sri Krishna Printers. 94481 35592

Printed by **Chinnaswamy** on behalf of Registrar, **Karnataka Arebhase Samskruthi Mathu Sahitya Academy**, and, Published by **Chinnaswamy** on behalf of **Karnataka Arebhase Samskruthi Mathu Sahithya Academy** (name of woner) and Printed at **Sri Krishna Computers & Printers**, Pooja Arcade, Madikeri. And Published at **Karnataka Arebhashe Samskruthi Mathu Sahithya Academy**, Coffee Krupa Building, 1st Floor, Raja Seat Road, Madikeri, Kodagu District. Editor : **Chinnaswamy**.